| | | | | | | | | | | | | | |
|---|---|---|---|---|---|---|---|---|---|---|---|---|---|
| 117234 | 129 | Protection work Thodu near Dota in Jappinamogaru village | D Kannda | Mangalore | 20.00 | 19.50 | 0.00 | 0.00 | 19.50 | 9.27 | 9.27 | 18.53 | 0.97 |
| 117235 | 130 | Protection work thodu flowing near Nagori in Kankanady village | D Kannda | Mangalore | 25.00 | 15.00 | 0.00 | 0.00 | 15.00 | 7.13 | 7.13 | 14.25 | 0.75 |
| 117238 | 131 | River Protection wall to Ramathirtha River in Manchalli village | Kodagu | Virajpet | 35.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 117239 | 132 | River Protection wall to kanuru dhobhi colony road and panikar Kollithodu kanuru village and Panchayath | Kodagu | Virajpet | 40.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 117240 | 133 | Protection wall tin besides dhobhi colony road and panikar kollithodu Kanuru village and Panchayath | Kodagu | Virajpet | 40..00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 117241 | 134 | Protection wall near chembe belur Imangala kudu raste of chembe belllur Panchayath | Kodagu | Virajpet | 30.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 117243 | 135 | Protection wall tin Kadumulluru village near ponnappa's land | Kodagu | Virajpet | 40.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 117244 | 136 | Construction of Bridge cum Barrage across Vedaganga River near Sidnal village | Belgaum | Chikodi | 183.00 | 199.00 | 0.00 | 0.00 | 199.00 | 94.53 | 94.52 | 189.05 | 9.95 |
| 117246 | 137 | Construction of Barrage across Agrani Nala near Pandegoam (Khotwadi) village | Belgaum | Athani | 66.00 | 124.00 | 0.00 | 0.00 | 124.00 | 58.90 | 58.90 | 117.80 | 6.20 |
| 117248 | 138 | Construction Barrage across Hirehalla near Belkod village | Belgaum | Chikodi | 45.00 | 83.50 | 0.00 | 0.00 | 83.50 | 39.67 | 39.66 | 79.33 | 4.17 |
| 117249 | 139 | Construction BCB across Santubal Halla (Raibag Bekkeri Road) near Raibag | Belgaum | Raibag | 40.0 | 40.00 | 0.00 | 0.00 | 40.00 | 19.00 | 19.00 | 38.00 | 2.00 |
| 117250 | 140 | Construction of Barage Cum Bridge across Bidari nala near Hudali village | Belgaum | Belgaum | 70.00 | 80.00 | 0.00 | 0.00 | 80.00 | 38.00 | 38.00 | 76.00 | 4.00 |

| | | | | | | | | | | | | | |
|---|---|---|---|---|---|---|---|---|---|---|---|---|---|
| 117251 | 141 | Construction of Barage across Tatti nala near Chanewadi village | Belgaum | Khanapur | 55.00 | 45.00 | 0.00 | 0.00 | 45.00 | 21.38 | 21.38 | 42.75 | 2.25 |
| 117252 | 142 | Construction of Barage across Tatti nala near Halashi vadi | Belgaum | Khanapur | 68.00 | 55.00 | 0.00 | 0.00 | 55.00 | 26.13 | 26.13 | 52.25 | 2.75 |
| 117253 | 143 | Construction of Percolation Tank near Mellikeri village | Belgaum | Savadati | 40.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| 117256 | 144 | Construction Bandara across nala near (Site-2) Pudakalakatti village | Dharwad | Dharwad | 50.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| 117257 | 145 | Improvement to Irrigation tank & canel near Tadkod village | Dharwad | Dharwad | 41.15 | 40.00 | 0.00 | 0.00 | 40.00 | 19.00 | 19.00 | 38.00 | 2.00 |
| 117259 | 146 | Removal of site & Protection work to Rayani M I Tank | Dharwad | Hubli | 20.00 | 25.00 | 0.00 | 0.00 | 25.00 | 11.88 | 11.88 | 23.75 | 1.25 |
| 117261 | 147 | Construction of Bridge cum Barage across in between Yaraguppi and Yerinarayanpur village | Dharwad | Kundagal | 119.00 | 126.0 | 0.00 | 0.00 | 126.00 | 59.85 | 59.85 | 119.70 | 6.30 |
| 117267 | 148 | Construction of Checkdam/ Bhandara across Dodda halla near Belakeri to Byadagi Taluk | Haveri | Byadagi | 53..00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| 117275 | 149 | Construction of Bandhra across Halla in between Hulkoti & Kurthkoti village | Gadag | Gadag | 40.00 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| 117280 | 150 | Construction of Percolation Tank at Halalli Site No.2 | Bijapur | Indi | 40.00 | 60.50 | 0.00 | 0.00 | 60.50 | 28.74 | 28.74 | 57.48 | 3.02 |
| 117282 | 151 | Construction of BCB near Kudagi village | Bijapur | B Bagewadi | 86.00 | 160.00 | 0.00 | 0.00 | 160.00 | 76.00 | 76.00 | 152.00 | 8.00 |
| 117289 | 152 | Construction of Barrage near othihal village | Bijapur | Sindagi | 52.00 | 100.00 | 0.00 | 0.00 | 100.00 | 47.50 | 47.50 | 95.00 | 5.00 |
| 117315 | 153 | Improvement to Chicklingdali MI Tank | Gulbarga | Chincholi | 40.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 117318 | 154 | Improvement to Nagaidlai MI Tank | Gulbarga | Chincholi | 30.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 117319 | 155 | Improvement to old Ainapur Mi Tank | Gulbarga | Chincholi | 20.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |

| | | | | | | | | | | | | | |
|---|---|---|---|---|---|---|---|---|---|---|---|---|---|
| 117320 | 156 | Improvement to Dharma Sagar MI Tank | Gulbarga | Chincholi | 30.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 117323 | 157 | Improvements to Bawgi MI Tank | Bidar | Bidar | 132.00 | 30.00 | 0.00 | 0.00 | 30.00 | 14.25 | 14.25 | 28.50 | 1.50 |
| 117324 | 158 | Improvements to Changlair MI Tank | Bidar | Humnabad | 396.00 | 20.00 | 0.00 | 0.00 | 20.00 | 9.50 | 9.50 | 19.00 | 1.00 |
| 117346 | 159 | Construction of Pecolation Tank near Hucheshawara camp | Koppal | Koppal | 44.00 | 45.00 | 0.00 | 0.00 | 45.00 | 21.38 | 21.38 | 42.75 | 2.25 |
| 117349 | 160 | Construction of Pecolation Tank near HRG Nagar | Koppal | Gangavathi | 40.00 | 45.00 | 0.00 | 0.00 | 45.00 | 21.38 | 21.38 | 42.75 | 2.25 |
| 117351 | 161 | Construction of Pickup to nala near Malakanamaraddi village | Koppal | Gangaavathi | 20.23 | 15.00 | 0.00 | 0.00 | 15.00 | 7.13 | 7.13 | 14.25 | 0.75 |
| 117357 | 162 | Construction of Checkdam near LIS D Nagenahalli village | Bellary | Bellary | 60.72 | 28.78 | 0.00 | 0.00 | 28.78 | 13.67 | 13.67 | 27.34 | 1.44 |
| 117358 | 163 | Construction of Checkdam @ LIS Jalihal near Jalihal village | Bellary | Belary | 60.72 | 28.40 | 0.00 | 0.00 | 28.40 | 13.49 | 13.49 | 26.98 | 1.42 |
| 117360 | 164 | Improvements of Lift irrigation scheme at badanahatti village | Bellary | Bellary | 188.00 | 60.00 | 0.00 | 0.00 | 60.00 | 28.50 | 28.50 | 57.00 | 3.00 |
| 117361 | 165 | Improvement to lift Irrrigation scheme Badanakoda village | Bellary | Bellary | 283.29 | 30.00 | 0.00 | 0.00 | 30.00 | 14.25 | 14.25 | 28.50 | 1.50 |
| 117362 | 166 | Construction of lift irrigation scheme near Udegolam (Project-1) | Bellary | Sirguppa | 48.51 | 90.00 | 0.00 | 0.00 | 90.00 | 42.75 | 42.75 | 85.50 | 4.50 |
| 117363 | 167 | Construction of Checkdam across halla near Papinayakanahalli village | Bellary | Hospet | 42.00 | 29.74 | 0.00 | 0.00 | 29.74 | 14.13 | 14.13 | 28.25 | 1.49 |
| 117364 | 168 | Construction of Checkdam nearGundlavaddigere village | Bellary | Hospet | 43.00 | 29.11 | 0.00 | 0.00 | 29.11 | 13.83 | 13.83 | 27.65 | 1.46 |
| 117365 | 169 | Construction of Checkdam near Godiganuru village | Bellary | Hospet | 42.00 | 29.72 | 0.00 | 0.00 | 29.72 | 14.12 | 14.12 | 28.23 | 1.49 |
| 117367 | 170 | Construction of Pickup near Nagenahalli village (Site) | Bellary | Sandur | 44.53 | 30.00 | 0.00 | 0.00 | 30.00 | 14.25 | 14.25 | 28.50 | 1.50 |

| | | | | | | | | | | | | | |
|---|---|---|---|---|---|---|---|---|---|---|---|---|---|
| 117368 | 171 | Construction of Checkdam near Sheliyappanahalli | Bellary | Sandur | 40.50 | 29.00 | 0.00 | 0.00 | 29.00 | 13.78 | 13.78 | 27.55 | 1.45 |
| 117369 | 172 | Construction of checkdam near Lingevahalli Tanda | Bellary | Kudligi | 47.50 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| 117370 | 173 | Construction of checkdam near Kakkuppi village (Site-2) | Bellary | Kudligi | 41.00 | 40.00 | 0.00 | 0.00 | 40.00 | 19.00 | 19.00 | 38.00 | 2.00 |
| 117371 | 174 | Construction of checkdam near across nala between the villages of K Obalapura and kadiabai village | Bellary | H B Halli | 43.70 | 49.25 | 0.00 | 0.00 | 49.25 | 23.40 | 23.40 | 46.79 | 2.46 |
| 117372 | 175 | Construction of checkdam near Kannihalli (site-2) village | Bellary | H B Halli | 42.90 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| 117373 | 176 | Construction of checkdam near Advimallanakere Tanda (Site-2) | Bellary | Hadagali | 52.86 | 37.60 | 0.00 | 0.00 | 37.60 | 17.86 | 17.86 | 35.72 | 1.88 |
| 117374 | 177 | Construction of checkdam near Sovenahalli Tanda village | Bellary | Huvinahadagali | 47.75 | 24.22 | 0.00 | 0.00 | 24.22 | 11.51 | 11.51 | 23.01 | 1.21 |
| 117375 | 178 | Construction of checkdam near Dungavathi Tanda | Bellary | Hadagali | 32.66 | 25.00 | 0.00 | 0.00 | 25.00 | 11.88 | 11.88 | 23.75 | 1.25 |
| | | Grand Total | | | 5266.39 | 4172.82 | 0.00 | 0.00 | 4172.82 | 1982.27 | 1981.91 | 3964.18 | 208.64 |

The State Govt. is able to execute the projets ahead of schedule, them the funds will be released accordingly

RUDRAMURTHY
Executive Engineer and
Ex Officio Under Secretary to Government
Water Resources Department
Minor Irrigation
Government of Karnataka

ಪಿ.ಆರ್. 398

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿದ 78 ಕೆರೆಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವ ಬಗ್ಗೆ.–

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 82 ಐಎಂಬಿ 85, ದಿನಾಂಕ 11–02–1988
2) ಸರ್ಕಾರದ ಆದೇಶ ಸಂಖ್ಯೆ: ಅಪಜೀ 139 ಇಸಿಓ 2008, ದಿನಾಂಕ 19–04–2010
3) ಸರ್ಕಾರದ ಪತ್ರ ಸಂಖ್ಯೆ: ನಅಇ 291 ಎಂಎನ್‌ವೈ 2010, ದಿನಾಂಕ 06–08–2010
4) ಸರ್ಕಾರದ ಪತ್ರ ಸಂಖ್ಯೆ: ನಅಇ 865 ಎಂಎನ್‌ವೈ 2010, ದಿನಾಂಕ 03–05–2011
5) ಸರ್ಕಾರದ ಪತ್ರ ಸಂಖ್ಯೆ: ನಅಇ 690 ಎಂಎನ್‌ವೈ 2010, ದಿನಾಂಕ 05–07–2011
6) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರ ಪತ್ರ ಸಂಖ್ಯೆ: ಆಯುಕ್ತರು/ಬಿಬಿಎಂಪಿ/ಕೆರೆಗಳು/ಪಿಎಸ್‌ಆರ್(ಜಿ)/4655/2011–12, ದಿನಾಂಕ 19–08–2011.
7) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರ ಪತ್ರ ಸಂಖ್ಯೆ ಬಿಡಿಎ/ಕಮೀಷನರ್/ಇಎಂ/ಇಓ5/1295/2011–12, ದಿನಾಂಕ 19–08–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 11–02–1988ರ ಆದೇಶದಲ್ಲಿ ಬೆಂಗಳೂರು ನಗರದಲ್ಲಿರುವ 115 ಕೆರೆಗಳನ್ನು ಸಂರಕ್ಷಣೆ ಪುನರುಜ್ಜೀವನ ಅಭಿವೃದ್ಧಿ ಮತ್ತು ನಿರ್ವಹಣೆಗಾಗಿ ಅರಣ್ಯ ಇಲಾಖೆಗೆ ವಹಿಸಲಾಗಿತ್ತು. ನಂತರ ಮೇಲೆ (2) ರಲ್ಲಿ ಓದಲಾದ ದಿನಾಂಕ 19–04–2010ರ ಆದೇಶದಲ್ಲಿ

ಅರಣ್ಯ ಇಲಾಖೆಯು ಮೇಲ್ಕಂಡ 115 ಕೆರೆಗಳ ಪೈಕಿ 94 ಕೆರೆಗಳನ್ನು ಅಭಿವೃದ್ಧಿಗಾಗಿ ಈ ಕೆಳಕಂಡ ಷರತ್ತಿಗೊಳಪಟ್ಟು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸಲಾಗಿದೆ.

1. ಶ್ರೀ ಎಲ್. ಲಕ್ಷ್ಮಣರಾವ್ ಸಮಿತಿಯು ನೀಡಿರುವ ಶಿಫಾರಸ್ಸುಗಳನ್ನು ಅಂಗೀಕರಿಸಿ ಹೊರಡಿಸಲಾದ ದಿನಾಂಕ 11-02-1988ರ ಅದೇಶದಲ್ಲಿ ಸೂಚಿಸಿರುವ ಶಿಫಾರಸ್ಸುಗಳನ್ನು ಅನುಸರಿಸತಕ್ಕದ್ದು ಕೆರೆಗಳನ್ನು ಶುದ್ಧ ಜಲಕಾಯಗಳಂತೆಯೇ ನಿರ್ವಹಿಸುವುದು ಕೆರೆಗಳನ್ನು ಪುನರುಜ್ಜೀವನಗೊಳಿಸುವುದು.
2. ಕೆರೆಗಳ ಒಡೆತನವು ಸರ್ಕಾರದ ಕಂದಾಯ ಇಲಾಖೆಯಲ್ಲಿ ಉಳಿದಿರತಕ್ಕದ್ದು
3. ಕೆರೆ ಪ್ರದೇಶದ ಜಮೀನನ್ನು ಯಾವುದೇ ಉದ್ದೇಶಕ್ಕಾಗಿ ಮಂಜೂರು ಮಾಡಬಾರದು ಅಥವಾ ಹಂಚಿಕೆ ಮಾಡಬಾರದು. ಈ ಸಂಬಂಧ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 31343/95ರಲ್ಲಿ ದಿನಾಂಕ 28-08-1995ರಂದು ನೀಡಿರುವ ನಿರ್ದೇಶನಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದು.
4. ಕಂದಾಯ ಇಲಾಖೆ ಹಾಗೂ ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆಯ ನೆರವಿನೊಂದಿಗೆ ಕೆರೆಗಳ ಒತ್ತುವರಿಯನ್ನು ತೆರವುಗೊಳಿಸುವುದು.
5. ಕೆರೆಗಳನ್ನು ಹಸ್ತಾಂತರಿಸುವುದಕ್ಕೆ ಮುಂಚೆ ಯಾವುದೇ ನ್ಯಾಯಾಲಯದಲ್ಲಿ ಬಾಕಿ ಇರುವ ವ್ಯಾಜ್ಯಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಪರಿಣಾಮಕಾರಿಯಾಗಿ ನಿರ್ವಹಿಸತಕ್ಕದ್ದು ಹಾಗೂ ಇನ್ನೂ ಮುಂದೆ ನ್ಯಾಯಾಲಯದಲ್ಲಿ ಬಾಕಿ ಇರುವ ಇಂತಹ ಎಲ್ಲಾ ಪ್ರಕರಣಗಳಲ್ಲಿ ಒಬ್ಬ ಪ್ರತ್ಯರ್ಜಿದಾರನನ್ನಾಗಿ ಸೇರಿಸಿಕೊಳ್ಳುವಂತೆ ನ್ಯಾಯಾಲಯದಲ್ಲಿ ಅಫಿಡವಿಟ್ ಅನ್ನು ಸಲ್ಲಿಸತಕ್ಕದ್ದು.
6. ಕೆರೆಗಳ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳುವ ಮುನ್ನ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ವಿವರವಾದ ಯೋಜನಾ ವರದಿಯನ್ನು ಸಿದ್ಧಪಡಿಸಿ ಅದಕ್ಕೆ ಕೆರೆ ಅಭಿವೃದ್ಧಿ ಪ್ರಾಧಿಕಾರದ ಅನುಮೋದನೆ ಪಡೆಯತಕ್ಕದ್ದು.
7. ಕೆರೆಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಚಟುವಟಿಕೆಗಳ ಉಸ್ತುವಾರಿ ಮತ್ತು ಮೇಲ್ವಿಚಾರಣೆಯ ಸಂಪೂರ್ಣ ಅಧಿಕಾರ ಕೆರೆ ಅಭಿವೃದ್ಧಿ ಪ್ರಾಧಿಕಾರ ಹೊಂದಿರುತ್ತದೆ.
8. ಕೆರೆ ಅಭಿವೃದ್ಧಿ ಪ್ರಾಧಿಕಾರವು ತನ್ನ ಅಧೀನದಲ್ಲಿರುವ ಎಲ್ಲಾ ಕೆರೆಗಳನ್ನು ಅಭಿವೃದ್ಧಿ ಕಾರ್ಯ ಪೂರ್ಣಗೊಂಡ ನಂತರ ಸಂರಕ್ಷಣೆ ಮತ್ತು ಮುಂದಿನ ನಿರ್ವಹಣೆಗಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸುವುದು.
9. ಅಗತ್ಯವಿದ್ದಾಗ ಯಾವುದೇ ಕೆರೆಯನ್ನು ಹಿಂದಕ್ಕೆ ಪಡೆಯುವವರು ಹಂಚಿಕೆ ಮಾಡುವ ಹಕ್ಕನ್ನು ಸರ್ಕಾರ ಹೊಂದಿರುತ್ತದೆ.
10. ಅಗತ್ಯವಾದಾಗ ಎಲ್ಲಾ ಅಥವಾ ಯಾವುದೇ ಕೆರೆಯನ್ನು ಹಿಂದಕ್ಕೆ ಪಡೆಯುವ/ಮರುಹಂಚಿಕೆ ಮಾಡುವ ಹಕ್ಕನ್ನು ಸರ್ಕಾರವು ಹೊಂದಿರುತ್ತದೆ.
11. ಕೆರೆಗೆ ಕೊಳಚೆ ನೀರನ್ನು ಹಾಗೂ ಹೊಲಸನ್ನು ಹರಿಸಬಾರದು, ಒತ್ತುವರಿಯನ್ನು ತೆರವುಗೊಳಿಸಬೇಕು ನೆಡುತೋಪು ಕಾರ್ಯಗಳನ್ನು ನಿರ್ವಹಿಸುವುದು. ಈ ಸಂಬಂದ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 1841/2006ರಲ್ಲಿ ದಿನಾಂಕ 17-09-2008ರಲ್ಲಿ ನೀಡಿರುವ ನಿರ್ದೇಶನವನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಕಟ್ಟುನಿಟ್ಟಾಗಿ ಪಾಲಿಸತಕ್ಕದು.
12. ಈ ಕೆರೆಗಳನ್ನು ವಿವಿಧ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವಾಗ ಕರ್ನಾಟಕ ಅರಣ್ಯ, ಇಲಾಖೆ ಮತ್ತು ಇತರ ಸಂಸ್ಥೆಗಳಿಂದ ಸೃಜಿಸಲ್ಪಟ್ಟಿರುವ ಸ್ವತ್ತುಗಳನ್ನು ಪಟ್ಟಿಮಾಡತಕ್ಕದ್ದು. ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸತಕ್ಕದ್ದು.

ಮೇಲೆ (3), (4) ಮತ್ತು (5)ರಲ್ಲಿ ಓದಲಾದ ಪತ್ರಗಳಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ನಿಯಂತ್ರಣದಲ್ಲಿದ್ದ 32 ಕೆರೆಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಬಿ.ಬಿ.ಎಂ.ಪಿ. ವ್ಯಾಪ್ತಿಯಲ್ಲಿ ಬರುವ ಕೆರೆಗಳ ಪುನರುಜ್ಜೀವನಕ್ಕೆ ಸಂಬಂಧಿಸಿದಂತೆ ರಾಜ್ಯ ಉಚ್ಚ ನ್ಯಾಯಾಲಯಲ್ಲಿ ಮೆ॥ ಎನ್ವಿರಾನ್‌ಮೆಂಟ್ ಸಪೋರ್ಟ್ ಗ್ರೂಪ್ (M/s Environment Support Group) ಮತ್ತು ಶ್ರೀ ಲಿಯೋ ಸಲ್ಡಾನಾ (Leo Saldanha) ಇವರು ಸಲ್ಲಿಸಿರುವ ಸಾರ್ವಜನಿಕ ಹಿತಾಸಕ್ತಿ ರಿಟ್ ಅರ್ಜಿ ಸಂಖ್ಯೆ: 817/2008 ಮತ್ತು ಇತರೆ ಪ್ರಕರಣಗಳಲ್ಲಿ ದಿನಾಂಕ 26-11-2010 ರಂದು ನೀಡಿದ ಆದೇಶದಲ್ಲಿ ಬೆಂಗಳೂರು ನಗರದಲ್ಲಿರುವ ಕೆರೆಗಳ ಸಂರಕ್ಷಣೆಯ ಬಗ್ಗೆ ಪ್ರಗತಿಯ ವರದಿಯನ್ನುಪರಿಶೀಲಿಸಲು ಉಚ್ಚ ನ್ಯಾಯಾಲಯದ ಮಾನ್ಯ ನ್ಯಾಯಾಧೀಶರು ಹಾಗೂ ಕರ್ನಾಟಕ ಕಾನೂನು ಸೇವಾ ಸಮಿತಿಯ ಅಧ್ಯಕ್ಷರಾದ ಶ್ರೀ ಎನ್. ಕೆ. ಪಾಟೀಲ್ ರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲು ಆದೇಶಿಸಿತ್ತು. ಈ ಸಮಿತಿಯು ದಿನಾಂಕ 06-07-2011 ರಂದು ನ್ಯಾಯಾಲಯಕ್ಕೆ ವರದಿಯನ್ನು ಸಲ್ಲಿಸಿತ್ತು. ಈ ವರದಿಯ ಅನುಷ್ಠಾನದ ಬಗ್ಗೆ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 22-07-2011 ರಂದು ನಡೆದ ಸಭೆಯಲ್ಲಿ ಚರ್ಚಿಸಲಾಗಿರುತ್ತದೆ. ಸದರಿ ಸಭೆಯಲ್ಲಿ ಬೆಂಗಳೂರು ನಗರದ ಕೆರೆಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಎಲ್ಲಾ ಇಲಾಖೆಗಳು ತೆಗೆದುಕೊಳ್ಳಬೇಕಾದ ಕ್ರಮಗಳ ಕುರಿತು ನಗರಾಭಿವೃದ್ಧಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಮನ್ವಯ ಸಮಿತಿಯ ಸಭೆಯನ್ನು ಕರೆದು ಚರ್ಚಿಸುವಂತೆ ಸೂಚಿಸಲಾಗಿರುತ್ತದೆ. ಅದರಂತೆ 18-08-2011ರಂದು ನಗರಾಭಿವೃದ್ಧಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಭೆ ನಡೆಸಲಾಗಿದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು ಮೇಲೆ (6)ರಲ್ಲಿ ಓದಲಾದ ದಿನಾಂಕ 19-08-2011ರ ಪತ್ರದಲ್ಲಿ ಪಾಲಿಕೆಯ ವಶದಲ್ಲಿರುವ 132 ಕೆರೆಗಳ ಹಾಗೂ ಇನ್ನಿತರೆ 10 ಕೆರೆಗಳ ಪೈಕಿಪಾಲಿಕೆ ವತಿಯಿಂದ ಅಭಿವೃದ್ಧಿಗೊಳಿಸುತ್ತಿರುವ ಕೆರೆಗಳನ್ನು ಹೊರತುಪಡಿಸಿ ಉಳಿದ 88 ಕೆರೆಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವಂತೆ ಕೋರಲಾಗಿತ್ತು. ದಿನಾಂಕ 18-08-2011 ರಂದು ನಡೆದ ಸಭೆಯಲ್ಲಿ ತೀರ್ಮಾನಿಸಿದಂತೆ ಪಾಲಿಕೆ ವಶದಲ್ಲಿರುವ 132 ಕೆರೆಗಳು ಹಾಗೂ ಕೆರೆಗಳ ಅಭಿವೃದ್ಧಿ ಪ್ರಾಧಿಕಾರದಿಂದ ಹಸ್ತಾಂತರಿಸುವ ಸಾರಕ್ಕಿ/ಜರಗನಹಳ್ಳಿ ಕೆರೆಗಳ ಪೈಕಿ 55 ಕೆರೆಗಳನ್ನು ಪಾಲಿಕೆಯಿಂದ ಅಭಿವೃದ್ಧಿಪಡಿಸಲು ಉಳಿಸಿಕೊಂಡು ಬಾಕಿ 78 ಜೀವಂತ ಕೆರೆಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಬಹುದಾಗಿರುತ್ತದೆ. ಹೀಗೆ ಪ್ರಾಧಿಕಾರಕ್ಕೆ ಹಸ್ತಾಂತರಿಸಲಾಗುವ ಕೆರೆಗಳನ್ನು ಹೊರತುಪಡಿಸಿ ಪಾಲಿಕೆಯ ನಿಯಂತ್ರಣದಲ್ಲಿ ಉಳಿಯುವ ಕೆರೆಗಳ ಅಭಿವೃದ್ಧಿಗೆ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 817/2008 ಮತ್ತು ಇತರೆ ಸಂಬಂಧಪಟ್ಟ ವಿಷಯಗಳಿಗೆ ಸಂಬಂಧಿಸಿದಂತೆ

ದಿನಾಂಕ 07–07–201 ರಂದು ನೀಡಿರುವ ಆದೇಶದಲ್ಲಿ ಕೆರೆಗಳ ಅಭಿವೃದ್ಧಿಗೆ ತಗಲುವ ವೆಚ್ಚದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ಸರ್ಕಾರದಿಂದ ಸಮನಾಗಿ ಹಣವನ್ನು ವಾರ್ಷಿಕ ವೆಚ್ಚದಲ್ಲಿ ಮೀಸಲಿಟ್ಟು, ಕೆರೆಗಳ ಮುಂದುವರೆದ ಕೆಲಸಗಳಿಗಾಗಿ ಹಣವನ್ನು ತ್ರೈಮಾಸಿಕದಲ್ಲಿ ಬಿಡುಗಡೆ ಮಾಡಬೇಕು ಹಾಗೂ ಇದಕ್ಕಾಗಿ ಬೇರೆ ಲೆಕ್ಕ ಶೀರ್ಷಿಕೆಯನ್ನು ಮಾಡಬೇಕು ಎಂದು ತಿಳಿಸಿರುವುದರಿಂದ ಸಾಕಷ್ಟು ಅನುದಾನವನ್ನು ಬಿಡುಗಡೆಗೊಳಿಸುವಂತೆ ಹಾಗೂ ಪಾಲಿಕೆಯವತಿಯಿಂದ ಈಗಾಗಲೇ ಅಭಿವೃದ್ಧಿಗೊಳಿಸಿರುವ, ಅಭಿವೃದ್ಧಿಗೊಳಿಸುತ್ತಿರುವ ಹಾಗೂ ಡಿ.ಪಿ.ಆರ್./ಅಂದಾಜು ಪಟ್ಟಿ ತಯಾರಿಸಿರುವ ಕೆರೆಗಳನ್ನು ಹೊರತುಪಡಿಸಿ ಉಳಿದಿರುವ 78 ಕೆರೆಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವ ಸಂಬಂಧ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರು ಮೇಲೆ (7)ರಲ್ಲಿ ಓದಲಾದ ದಿನಾಂಕ 19–08–2011ರ ಪತ್ರದಲ್ಲಿ ಪಾಲಿಕೆಗೆ ಸೇರಿದ 78 ಕೆರೆಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಸಹಮತಿಸಿರುತ್ತಾರೆ ಹಾಗೂ ಈ ಕೆರೆಗಳನ್ನು ಅಭಿವೃದ್ಧಿಪಡಿಸಲು ಸರ್ಕಾರದಿಂದ ಸಹಾಯಧನ ಒದಗಿಸುವಂತೆ ಕೋರಿರುತ್ತಾರೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರ ಪ್ರಸ್ತಾವನೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿದೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ದಿನಾಂಕ 19–08–2011ರ ಪತ್ರದೊಂದಿಗೆ ಲಗತ್ತಿಸಲಾದ ಹಾಗೂ ಈ ಆದೇಶದ ಅನುಬಂಧದೊಂದಿಗೆ ಲಗತ್ತಿಸಲಾದ 78 ಕೆರೆಗಳನ್ನು ಅಭಿವೃದ್ಧಿ ಮತ್ತು ನಿರ್ವಹಣೆಗಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಸಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 441 ಎಂಎನ್‌ವೈ 2011, ಬೆಂಗಳೂರು, ದಿನಾಂಕ 25–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿದ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ 78 (ಎಪ್ಪತ್ತೆಂಟು) ಕೆರೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಅಪಜೀ 139 ಇಸಿಓ 2008, ದಿನಾಂಕ 19–04–2010ರಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ನಅಇ 441 ಎಂಎನ್‌ವೈ 2011, ಬೆಂಗಳೂರು, ದಿನಾಂಕ 25–01–2012ಕ್ಕೆ ಅನುಬಂಧ**

LIST OF LAKES OF BBMP HANDING OVER TO BDA

| Sl. No. | Name of Lake / Taluk | Village Name & Sy. No. | Total Area | |
|---|---|---|---|---|
| | | | Ac | Gu |
| 1 | Gunjur mouji kere / Bangalore East | Gunjur-301 (P) | 59.00 | 13.00 |
| | | Kachamaranahalli-74 | 4.00 | 26.00 |
| 2 | Panathur kere-38 / Bangalore East | Panathur-38 | 27.00 | 17.00 |
| 3 | Gangasetty kere / Bangalore East | K R Pura-58 | 18.00 | 32.00 |
| | | Devasandra-46 | 2.00 | 35.00 |
| 4 | Nalluralli tank / Bangalore East | Nalluralli-4 | 20.00 | 34.00 |
| | | Pattandur Agrahara-85 | 27.00 | 5.00 |
| 5 | Siddapura kere / Bangalore East | Siddapura-18 | 27.00 | 35.00 |
| 6 | Panathur kere-48 / Bangalore East | Panathur-48 | 6.00 | 30.00 |
| 7 | Bhoganalli kere / Bangalore East | Ghoganalli-21 | 12.00 | 24.00 |
| 8 | Devara bisenalli kere / Bangalore East | Devarabisenalli-18 | 13.00 | 31.00 |
| 9 | Gunjur Palya kere / Bangalore East | Gunjur-83 | 36.00 | 27.00 |
| 10 | Gunjur kere (Carmelarm) / Bangalore East | Gunjur-95 | 9.00 | 17.00 |
| 11 | K R Puram (BEML) / Bangalore East | Benniganahalli-47 | 18.00 | 25.00 |
| | | Benniganahalli-55 | 27.00 | 14.00 |
| 12 | Vibhuthipura kere / Bangalore East | Vibhuthipura-175 | 45.00 | 18.00 |
| 13 | Horamavu kere / Bangalore East | Horamavu-83 | 37.00 | 14.00 |
| 14 | Junnasandra kere / Bangalore East | Junnasandra-32 | 24.00 | 33.00 |
| 15 | Chikka bellandur ker / Bangalore East | Chikka bellandur-9 | 67.00 | 14.00 |
| 16 | Horamavu Agara / Bangalore East | Horamavu Agara-77 | 51.00 | 34.00 |
| 17 | Sadaramangala kere / Bangalore East | Sadaramangala kere-61 | 51.00 | 4.00 |
| | | Kodagehalli-8 | 1.00 | 17.00 |
| 18 | Garudachar Palya kere-1 (Acchanakere)/ Bangalore East | Mahadev pura-31 | 5.00 | 36.00 |
| 19 | Hoodi kere-1 / Bangalore East | Hoodi-79 | 15.00 | 10.00 |
| 20 | Hoodi kere (GIDDANA KERE) / Bangalore East | Hoodi-138 | 28.00 | 31.00 |

| | | | | |
|---|---|---|---|---|
| 21 | Garudachar Palya-2 (Goshala) / Bangalore East | Mahadev pura-86 | 5.00 | 14.00 |
| 22 | Chikkabasavanapura kere / Bangalore East | Basavanapura-14 | 14.00 | 7.00 |
| 23 | Bhattralli kere / Bangalore East | Bhattralli-2 | 18.00 | 10.00 |
| 24 | Jimkenalli kere / Bangalore East | Varanasi-47 | 8.00 | 24.00 |
| 25 | Sitaram Palya / Bangalore East | Sonnenalli / Seetharama Playa-33 | 23.00 | 37.00 |
| 26 | Pattandur Agrahar / Bangalore East | Pattandur Agrahara-124 | 16.00 | 35.00 |
| 27 | Mahadevapura / Bangalore East | Mahadevapura-187 | 13.00 | 11.00 |
| 28 | Nagareshwara-Nagenahalli Lake / Bangalore East | Nagareshwara Nagenahalli-10 | 11.00 | 8.00 |
| 29 | Kelagina kere / Byrasandra / Bangalore East | Byrasandra-112 | 12.00 | 21.00 |
| 30 | Kadirenapalya kere / Bangalore East | Binnamangala-99 | 37.00 | 4.00 |
| 31 | Pattandur Agrahar / Bangalore East | Pattandur Agrahar-54 | 12.00 | 37.00 |
| 32 | Baiyapanahalli kere / Bangalore East | Baiyappanahalli-61 | 8.00 | 9.00 |
| 33 | Sarakki / Jaraganahalli / Puttenhalli Lake / Bangalore South | Jaraganahalli-7 | 38.00 | 16.00 |
| 34 | Konnappana Agrahar / Bangalore South | Naganathpura (South)-81 | 5.00 | 17.00 |
| 35 | Chikkabegure / Bangalore South | Begur-0168 | 32.00 | 19.00 |
| | | Singsandra-0086 | 10.00 | 26.00 |
| 36 | Haralakunte Lake (Somasandrakere) / Bangalore South | Haralakunte-0051 | 16.00 | 29.00 |
| 37 | Meenakshi kere / Bangalore South | Meenakshi-38 | 18.00 | 32.00 |
| 38 | Chowdeshwary layout / Bangalore South | Chowdeshwary-18 | 11.00 | 18.00 |
| 39 | Basapura Lake-2 / Bangalore South | Basapura-0066 | 10.00 | 29.00 |
| 40 | Basavanapura Lake / Bangalore South | Basavanapura-0014 | 7.00 | 34.00 |
| 41 | Begur Lake / Bangalore South | Begur-0094 | 137.00 | 24.00 |
| 42 | Chikkammanahalli Lake / Bangalore South | Kammanahalli-0022 | 5.00 | 19.00 |
| 43 | Devarakere Lake / Bangalore South | Bikasipura-0009 | 7.00 | 15.00 |
| 44 | Nyanappanahalli Lake / Bangalore South | Begur-0344 | 6.00 | 7.00 |
| 45 | Gottigere Lake / Bangalore South | Gottigere-0071 | 37.00 | 3.00 |
| 46 | Kalena Agrahara Lake / Bangalore South | Kalena Agrahara-0043 | 7.00 | 30.00 |
| 47 | Subbarayanakere / Bangalore South | Gottigere-0012 | 5.00 | 10.00 |
| 48 | Subedeharanakere / Bangalore South | Begur-0048 | 6.00 | 5.00 |
| 49 | Subramanyapura Lake / Bangalore South | Uttarahalli-0064 | 18.00 | 6.00 |
| 50 | Swaranakunte gudda kere / Bangalore South | Chandrashekarapura-0001 | 9.00 | 5.00 |
| 51 | Yellenhalli Lake / Bangalore South | Yelanahalli-0055 | 4.00 | 39.00 |
| 52 | Annappahalli / Yelachenahalli Lake / Bangalore South | Yelachenahalli-06, Gopinayakanahalli-14 | 6.00 | 32.00 |
| 53 | Kalyani / Kunte (Next to Sai Baga Temple) / Bangalore South | Vasanthapura-021 | 1.00 | 8.00 |
| 54 | Byrasandra kere / Chickpet | Byrasandra-0056 | 15.00 | 11.00 |
| 55 | Anjanapura Lake / Alahalli / Bangalore South | Alahalli-0030 Gollahali-0003 | 21.00 | 25.00 |
| 56 | Nagarabhavi / Bangalore South | Nagarabhvi-77 | 17.00 | 39.00 |
| 57 | Abbigere kere / Bangalore South / North Addl. | Abbigere-75 | 26.00 | 6.00 |
| | | Singapur-93 | 21.00 | 7.00 |
| 58 | Chikka Banavara / Bangalore North | Chikka Banavara-3 | 67.00 | 38.00 |
| | | Somashettyhalli-73 | 3.00 | 21.00 |
| | | Kere gullada halli-22 | 26.00 | 32.00 |
| | | Ganigarahalli-11, 15 | 4.00 | 14.00 |
| | | | 2.00 | 30.00 |
| 59 | Lakshmipura lake / Bangalore North | Lakshmipura-25 | 10.00 | 20.00 |
| 60 | Bellahalli / Bangalore North Addl | Bellahalli-68 | 18.00 | 32.00 |
| 61 | Medi Agrahara / Bangalore North Addl | Medi Agrahara-33 | 13.00 | 15.00 |
| 62 | Shivanahalli / Bangalore North Addl | Shivanahalli-48 | 14.00 | 30.00 |
| | | Allalasandra-38 | 3.00 | 22.00 |
| 63 | Singapura kere / Bangalore North Addl | Singapura-102 | 66.00 | 18.00 |

| | | | | |
|---|---|---|---|---|
| 64 | Singapura kere / Bangalore North Addl | Srinivasapura-2 | 3.00 | 14.00 |
| 65 | Vaderahalli / Bangalore North Addl | Vaderahalli-32 | 9.00 | 34.00 |
| 66 | Kalkere Rampura kere / Bangalore East | Kalkere-162 | 64.00 | 25.00 |
| | | Rampura-22 | 3.00 | 4.00 |
| | | Maragondanahalli-71 | 11.00 | 35.00 |
| | | Huvineane-86 | 108.00 | 7.00 |
| 67 | Chennasandra-2 / Bangalore East | Banasawadi-211 | 42.00 | 38.00 |
| 68 | Dubasipalya / Bangalore South | Valagerchalli-43 | 23.00 | 35.00 |
| 69 | Pattanagere Kenchenhalli / Bangalore South | Pattanagere-43 | 0.00 | 31.00 |
| | | Kenchenahalli-33 | 3.00 | 39.00 |
| 70 | Ibblur / Bangalore South | Ibbblur-0036 | 18.00 | 6.00 |
| 71 | Gowdanapalya Lake / Bangalore South | Kadirenahalli-33 | 9.00 | 30.00 |
| 72 | Gattagigere Palya / Bangalore South | Somapura-27/53 | 0.00 | 37.00 |
| 73 | Chikkegowdanapalya / Bangalore South | Hemmagipura-92 | 1.00 | 33.00 |
| 74 | Kengeri Lake / Bangalore South | Kengeri-15 | 27.00 | 3.00 |
| | | Velagerahalli-85 | 5.00 | 13.00 |
| 75 | Varahasandra Lake / Bangalore South | Hemmigepura-004 | 4.00 | 11.00 |
| | | Varahasandra-0024 | 13.00 | 9.00 |
| 76 | Vishvaneedam Lake / Bangalore North | Herohalli-50 | 4.00 | 30.00 |
| 77 | Mallesandra Gudde kere / Bangalore North | Mallasandra-49 | 11.00 | 28.00 |
| | | Mallasandra-50 | 5.00 | 23.00 |
| 78 | Sriganda Kaval (Near Rajiv Gandhi Nagar) Bangalore North | Sriganda Kaval-15 | 6.00 | 33.00 |

**S. Renukaradhya**
Under Secretary to Government
Urban Development Department

P.R. 454

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ನಅಇ 296 ಬೆಂರೂಪ್ರಾ 2009, ಬೆಂಗಳೂರು ದಿನಾಂಕ : 23–01–2012**

**ವಿಷಯ :** ದಾವಣಗೆರೆ–ಹರಿಹರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾಯೋಜನೆ (ಪರಿಷ್ಕೃತ–1)ಕ್ಕೆ ಸರ್ಕಾರದ ಅಂತಿಮ ಅನುಮೋದನೆ ನೀಡಿರುವ ಬಗ್ಗೆ.

ಸರ್ಕಾರದ ಆದೇಶ ಸಂಖ್ಯೆ : ನಅಇ 81 ಬೆಂರೂಪ್ರಾ 2008, ಬೆಂಗಳೂರು ದಿನಾಂಕ : 26–07–2008ರ ದಾವಣಗೆರೆ–ಹರಿಹರ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–1)ಕ್ಕೆ ಆದೇಶದಲ್ಲಿ ಅಂತಿಮ ಅನುಮೋದನೆ ನೀಡಿರುವ ವರದಿಯಲ್ಲಿನ ವಲಯ ನಿಯಮಾವಳಿ ಭಾಗದಲ್ಲಿರುವ "Size of Plots" ಪ್ಯಾರಾದಲ್ಲಿ (ಪುಟ ಸಂಖ್ಯೆ : 135) 36.0 ಚ.ಮೀ. ಎಂದು ನಮೂದಿಸಿರುವುದನ್ನು 54.0 ಚ.ಮೀ. ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 455

## ವಸತಿ ಸಚಿವಾಲಯ

**ವಿಷಯ :** ಕೇಂದ್ರ ಪುರಸ್ಕೃತ ಯೋಜನೆ ನರ್ಮ್ ಯೋಜನೆಯಡಿ ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆ (IHSDP) ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ : ಕಕೊಅಮ : ಲೆ.ಪ.ಶಾ : Jn NURM-IHSDP ಅನುದಾನ : 2011–12, ದಿನಾಂಕ : 29–11–2012.
2. ಆರ್ಥಿಕ ಇಲಾಖೆ (ವೆಚ್ಚ–3/9) ಹಿಂಬರಹ ಸಂಖ್ಯೆ = FD/660/Exp-9/2011, ದಿನಾಂಕ : 13–01–2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರ ಪತ್ರದಲ್ಲಿ ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿಯಲ್ಲಿ (IHSDP) ರಾಜ್ಯಾದ್ಯಂತ ವಿವಿಧ ನಗರ/ಪಟ್ಟಣಗಳಲ್ಲಿ ಮನೆಗಳ ನಿರ್ಮಾಣ ಹಾಗೂ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತದೆ. ಸದರಿ ಯೋಜನೆಗೆ ಕೇಂದ್ರ ಸರ್ಕಾರದಿಂದ ಈಗಾಗಲೇ ಬಿಡುಗಡೆಯಾಗಿರುವ ಅನುದಾನಕ್ಕೆ ಸಮಾನಾಂತರವಾಗಿ ಬಿಡುಗಡೆಯಾಗಬೇಕಾದ ಹಂತ–1 ಮತ್ತು ಹಂತ–2ರ ನಗರ/ಪಟ್ಟಣಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರದ ಬಾಕಿ ವಂತಿಗೆ ರೂ. 1126.32 ಲಕ್ಷಗಳನ್ನು 2011–12ನೇ ಸಾಲಿನ ಪೂರಕ ಆಯವ್ಯಯದಲ್ಲಿ ನಿಗದಿಪಡಿಸಿ ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯ

ಲೆಕ್ಕ ಶೀರ್ಷಿಕೆ 2217–04–191–2–03 (IHSDP) ಅಡಿಯಲ್ಲಿ ಮಂಡಳಿಗೆ ಬಿಡುಗಡೆ ಮಾಡಬೇಕೆಂದು ಆಯುಕ್ತರು, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 12 ಕೊಮಂಲೆ 2009, ಬೆಂಗಳೂರು, ದಿನಾಂಕ : 25–01–2012**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಕೈಗೊಂಡಿರುವ ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ (IHSDP) ಯೋಜನೆಯಡಿಯ ಮನೆಗಳ ನಿರ್ಮಾಣ ಹಾಗೂ ಅಭಿವೃದ್ಧಿ ಕಾಮಗಾರಿಗಳಿಗೆ ಕೇಂದ್ರ ಸರ್ಕಾರದ ವಂತಿಗೆಗೆ ಸಮಾನಾಂತರವಾಗಿ ರಾಜ್ಯ ಸರ್ಕಾರದ ಪಾಲಿನ ಬಾಕಿ ಅನುದಾನವನ್ನು 2011–12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2217–04–191–2–03 (IHSDP) ಯಡಿ ಪೂರಕ ಅಂದಾಜು–II ರಲ್ಲಿ ಒದಗಿಸಿರುವ ಅನುದಾನ ರೂ. 1126.32 ಲಕ್ಷಗಳನ್ನು (ಹನ್ನೊಂದು ಕೋಟಿ ಇಪ್ಪತ್ತಾರು ಲಕ್ಷದ ಮೂವತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ಕಾಲಕಾಲಕ್ಕೆ ಕೇಂದ್ರ ಸರ್ಕಾರದಿಂದ ಹೊರಡಿಸುವ ಸೂಚನೆ, ಮಾರ್ಗಸೂಚನೆ, ಕೇಂದ್ರ ಸಿ.ಎಸ್.ಎಂ.ಸಿ. ಸಭೆಯ ನಡವಳಿಯಲ್ಲಿ ನೀಡಿರುವ ಸೂಚನೆ, ಎಸ್.ಎಲ್.ಇ.ಸಿ (IHSDP) ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದರ ಜೊತೆಗೆ ಈ ಕೆಳಕಂಡ ಷರತ್ತುಗಳನ್ನು ಪಾಲಿಸಬೇಕೆಂದು ಸೂಚಿಸಲಾಗಿದೆ.

1. ಈ ಮೊತ್ತವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
2. ಫಲಾನುಭವಿಗಳಿಂದ ವಂತಿಕೆಯು ನಿಯಮಿತವಾಗಿ ಪಾವತಿಯಾಗುವಂತೆ ಕ್ರಮ ವಹಿಸತಕ್ಕದ್ದು.
3. ಯೋಜನೆಯ ಅನುಷ್ಠಾನದ ಹಂತದ ಬಗ್ಗೆ ಕಾಲಕಾಲಕ್ಕೆ ವರದಿಗಳನ್ನು ಕೇಂದ್ರ/ರಾಜ್ಯ ಸರ್ಕಾರಕ್ಕೆ ನೀಡತಕ್ಕದ್ದು.
4. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
5. ಸರ್ಕಾರಕ್ಕೆ ಆಡಿಟ್ ವರದಿಯನ್ನು ನಿಗದಿತ ಸಮಯಕ್ಕೆ ಸಲ್ಲಿಸತಕ್ಕದ್ದು.
6. ಪ್ರಸಕ್ತ ಆರ್ಥಿಕ ವರ್ಷದಲ್ಲಿ (2011–12) ಬಿಡುಗಡೆಯಾಗಿರುವ ಮೊತ್ತಕ್ಕೆ ನಿಗದಿತ ಅವಧಿಯೊಳಗೆ ಹಣ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
7. ಈ ಆದೇಶದಲ್ಲಿ ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯು, ವಸತಿ ಇಲಾಖೆಯ ಉಪ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ : FD/660/Exp-9/2011, ದಿನಾಂಕ : 13–01–2012 ಸೂಚನೆಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4

ವಸತಿ ಇಲಾಖೆ

ಪಿ.ಆರ್. 456

## ENERGY SECRETARIAT

**Sub:** Issue of directions under Section 11 of Electricity Act 2003 to the Generators in the State for Supply of Energy to the State subject to determination of final tariff by Hon'ble Karnataka Electricity Regulatory Commission (KERC).

**Read :**
1. Letter No. PCKL/A11/22/2007-08/5860, dated 31-12-2011 of Managing Director, Power Company of Karnataka Limited, Bangalore.
2. Letter No. PCKL/A1/22/2007-08/5918, dated 03-01-2012 of Managing Director, Power Company of Karnataka Limited, Bangalore.
3. Letter No. PCKL/A1/19/2009-10/6585, dated 25-01-2012 of Managing Director, Power Company of Karnataka Limited, Bangalore.

**Preamble:**

1. The State is facing power shortage during 2011-12. There is a deficit between demand and supply in the State. Owing to steep increase over the years in the demand for power supply, the daily consumption of energy has also increased.
2. Compared to previous year, the State has received less rainfall in the catchment areas of the main Hydel reservoirs. As of now, 53% of the State's generation is met from Hydel sources.
3. The State is making concerted efforts to increase generation . The first unit of the M/s UPCL (600 MW) was synchronized on 18th July 2010, the unit was stabilized and COD was achieved in November 2010. 402 MW of RE power was added during 2010-11 and 441 MW of power is expected to be added during 2011-12. Even with the addition of 250 MW from RTPS unit 8 and 60 MW from Kaiga Unit 4 being Karnataka share, the State continues to face deficit.
4. Following issues have also contributed to the widening of the gap between demand and supply :-
    a. As on 31st December 2011 only 5871 MU of Hydro power is left in the major reservoirs. After deducting 10% carry over only 5000 MU is available for balance period of 182 days i.e., up to 30th June 2012.

b. Evacuation line for full load of UPCL Unit II (540 MW) which was expected by June 2012 has been postponed due to delay in MOEF clearance.

c. None of the power plants either from CGS or from KPCL are expected to commission during 2011-12 except Vallur TPP Unit I from which State allocation is meager i.e. 37.17 MW.

d. Karnataka has experienced a reduction in power availability from its share from Central Generating Stations. As against the allocated share of 1700 MW daily, on an average only about 1522 MW is being received resulting in a shortage of about 178 MW per day. This has further disrupted power availability to the State.

e. Recurring problems in coal supply to RTPS units. Therefore generation from all the Units of RTPS is affected.

f. The second unit of 500 MW capacity of Bellary is expected to be commissioned by the forest week of March 2012. But, during the initial period of stabilization full power may not get generated daily.

5. The gap between the present and previous year's consumption is likely to widen in the ensuing summer months upto May 2012.

6. The State Government has been reviewing the power situation on a regular basis. It has implemented a series of measures to ensure effective load management and minimum disruption of power in the State. Presently, the Distribution Companies in the State are supplying 6 hours of 3 phase power supply and 10-11 hours single phase power supply in the rural areas. The availability of power in the designated areas is being closely monitored on feeder basis at the State level.

7. The Government is conscious of the fact that it is necessary to make power available to the consumers in the coming months especially having regard to the fact that there are examinations scheduled as well as the agriculture season till the month of April 2012.

8. The average State consumption in 2012 has increased by 10% as compared to consumption in 2011. The consumption may go upto 200 MU during peak summer months i.e. February 2012 to May 2012.

9. To augment power supply, the State has initiated measures for procuring power on competitive basis in the short term and medium term to meet the load of the summer months. As a result, advance action was initiated for procurement of power thorough competitive bidding process from September 2011 to June 2013 by Power Company of Karnataka Limited on behalf of Distribution companies of Karnataka.

10. As against the LOIs placed for procurement for 780 MW RTC firm power, only 530 MW is available from Karnataka generators. Out of 250 MW from outside sources, only small quantum was made available by SRLDC due to corridor congestion (November 2011-Nil, December 2011-72 MW, January 2012-60 MW, February 2012-Nil and March 2012-105 MW).

11. Even for procurement of peak power, as against LOIs issued for an average of about 438 MW, the quantum being received/cleared due to corridor congestion is also very small (February 2012-49 MW & March 2012-195 MW).

12. In view of non availability of corridor from ER/WR to SR, power flow to Karnataka from outside sources up to end May 2012 is meager.

13. The availability of power through Energy Exchanges is also constrained by corridor congestion. Rates are fluctuating and there is no guarantee that the required power can be obtained through energy exchange. Hence, the State cannot depend on any additional quantum of power from outside sources for the period between February 2012 to May 2012.

14. There is remote possibility of getting any additional quantum of power from outside generators either through bidding process or bilateral transactions due to corridor congestion.

15. In the circumstances, the endeavour of the State is that every possible source of power should be tapped in the coming months. To mitigate the likely power shortages and to maintain regularity and minimize inconvenience to the public is a matter of paramount concern in the coming months.

16. The State Government is of the considered opinion that the prevailing power situation in the State warrants measures to protect the public interest. The State is also aware that the genuine economic interests of the generators are to be borne in mind in view of costs of inputs for power generation.

17. In view of non-availability of corridor for inter-state transmission of power, the only option left is to tap power from Intra-State Generators of around 660 MW.

18. Following are the details of available generation capacity of Private Entrepreneurs in the State of Karnataka.

| Generation Source | Net Capacity in MW |
|---|---|
| Cogeneration without PPA | 419 |
| JSWEL Torangallu | Available for export : 250 MW out of 1160 MW<br>a. 650 MW is being scheduled against LoI to BESCOM.<br>b. 260 MW of Captive consumption. |

19. At meeting chaired by th Hon'ble Chief Minister, Govt. of Karnataka on 31-12-2011, it was decided to procure the power from the Generators within the State and fix the tentative tariff of Rs. 5.30 per unit obtained against previous tender notification dated 29-10-2011 subject to determination of final tariff by Hon'ble KERC for Generators pumping energy against order issued under Section 11.
20. Section 11 of EA 2003 provides that :
    1. "The Appropriate Government may specify that a generating company shall, in extraordinary circumstances operate and maintain any generating station in accordance with the directions of that Government in the public interest.
    2. The Appropriate Commission may offset the adverse financial impact of the directions referred to in sub-section (1) on any generating company in such manner as it considers appropriate".
21. As a matter of policy, it is in the public interest and the duty of the State to mitigate the acute power crisis in the State. Accordingly, all generators in the State are to run their plants to full exportable capacity and supply all the electricity thus generated to the State Grid, to bridge the demand supply gap. Hence, this order :

**Government Order No. EN 2 PPC 2012, Bangalore, Dated: 27th January 2012**

In the circumstances explained in the Preamble, and in exercise of the powers conferred under section-II of Electricity Act 2003, the State Government hereby issues the following directions in the public interest with effect from 1st February 2012 and will be in force till 31st May 2012 or until further orders whichever is earlier :-

a. All the Generators in the State of Karnataka shall operate and maintain their generating stations to maximum exportable capacity and shall supply all exportable electricity generated to the State Grid for utilization within the State subject to following conditions :
   i) The tentative tariff for supply of energy by the Generators under section 11 and who do not have Power Purchase Agreement with Electricity Supply Companies shall be Rs. 5.30/unit subject to determination of final tariff by Hon'ble KERC.
   ii) Joint meter readings taken by ESCOMs on 31-01-2012 midnight shall be basis for raising the monthly bills.
   iii) LC will be provided by the ESCOMs to the extent of cost of power allocated.
   iv) Rebate of 2% shall be allowed on the bill amount if payment is made within 5 days from the date of presentation of bill or otherwise 1% shall be allowed if the payments are made within 30 days.
   v) Due date for making payment shall be 30 days from the date of presentation of the bill.
   vi) Surcharge at 1.25% per month shall be payable if the payments are made beyond due date.
   vii) The Jurisdictional Distribution Licensee shall raise the bill for the energy imported by the Generators under section 11.
   viii) Energy pumped by Generators under section 11 shall be allocated amongst ESCOMs as per Govt. Order dated 12-10-2011 in line with CGS allocation and is as follows :

| | | |
|---|---|---|
| BESCOm | : | 49.62% |
| MESCOM | : | 08.33% |
| CESC | : | 10.61% |
| HESCOM | : | 18.18% |
| GESCOM | : | 13.26% |

   ix) The Generators shall raise the bills in the above proportion to respective ESCOMs.

b. The above tariff is provisional and is subject to approval of Karnataka Electricity Regulatory Commission (KERC).
c. The above proposal shall not be applicable for the Intra-State Generators who are having valid PPA's with the Distribution Licencees in the State of Karnataka.
d. All State Electricity Supply Companies (ESCOMs) shall submit a Memorandum on the power situation within 15 days from date of this order before the Karnataka Electricity Regulatory Commission (KERC) and request to fix the tariff for supply of energy by the Generators source-wise (i.e. Cogeneration, Biomass, Captive, IPP, etc) under section 11 of Electricity Act 2003.

By Order and in the Name of the Governor of Karnataka

**Suresh B. Krishnappanavar**

Under Secretary to Government

Energy Department

PR. NO. 457

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಆಂಜನೇಯ ಪವರ್–ಟೆಕ್ ಪ್ರೈವೇಟ್ ಲಿಮಿಟೆಡ್ ಇವರ 800 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಣೆ ಮಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಡಿಇ 89 ಎನ್‌ಸಿಇ 2002, ದಿನಾಂಕ : 08–05–2002.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 172 ಎನ್‌ಸಿಇ 2010, ದಿನಾಂಕ : 02–07–2010.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH–83/2011/22, ದಿನಾಂಕ : 05/06–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಶ್ರೀ ಆಂಜನೇಯ ಪವರ್–ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಸಿಂಧನೂರು ಬಲಿ ಡಿ–54 ಟಿ.ಎಲ್.ಬಿ.ಸಿ. ಕೆನಾಲ್‌ನ 628ನೇ ಚೈನೇಜ್‌ನಲ್ಲಿ 800 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲ್ಕಂಡ 800 ಕಿಲೋ ವ್ಯಾಟ್ ಸಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ದಿನಾಂಕ : 30–09–2010 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಶ್ರೀ ಆಂಜನೇಯ ಪವರ್–ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಸಿಂಧನೂರು ಬಳಿ ಡಿ–54 ಟಿ.ಎಲ್.ಬಿ.ಸಿ. ಕೆನಾಲ್‌ನ 628ನೇ ಚೈನೇಜ್‌ನಲ್ಲಿ ಹಂಚಿಕೆಯಾಗಿರುವ 800 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಕೆಲಸ ಕಾರ್ಯಗಳು ಶೇಕಡ 100 ರಷ್ಟು ಪೂರ್ಣಗೊಂಡಿರುವುದರಿಂದ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ : 31–01–2012 ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 26 ಎನ್‌ಸಿಇ 2012, ಬೆಂಗಳೂರು, ದಿನಾಂಕ : 24–01–2012**

ಶ್ರೀ ಆಂಜನೇಯ ಪವರ್–ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಸಿಂಧನೂರು ಬಳಿ ಡಿ–54 ಟಿ.ಎಲ್.ಬಿ.ಸಿ. ಕೆನಾಲ್‌ನ 628ನೇ ಚೈನೇಜ್‌ನಲ್ಲಿ ಹಂಚಿಕೆಯಾಗಿರುವ 800 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಅಂತಿಮವಾಗಿ ಕಾಲಾವಕಾಶವನ್ನು ದಿನಾಂಕ : 31–03–2012 ರವರೆಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 458

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸಚಿವರ ಸ್ಥಾನಮಾನವನ್ನು ಹೊಂದಿರುವ ಕಾರ್ಯನಿರ್ವಾಹಕ/ಪ್ರಾಧಿಕಾರಗಳಿಗೆ ಸೌಲಭ್ಯಗಳನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 41 ಶಿಸನೇ 2002, ದಿನಾಂಕ : 17–06–2002.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 6 ಶಿಸನೇ 2009, ದಿನಾಂಕ : 28–04–2009.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 68 ಶಿವಾನೀ 2008, ದಿನಾಂಕ : 22–08–2008.
4. ಸುತ್ತೋಲೆ ಸಂಖ್ಯೆ : ಸಿಆಸುಇ 148 ಶಿಸನೇ 2010, ದಿನಾಂಕ : 26–02–2011.
5. ತಿದ್ದೋಲೆ ಸಂಖ್ಯೆ : ಸಿಆಸುಇ 148 ಶಿಸನೇ 2010, ದಿನಾಂಕ : 26–02–2011.
6. ತಿದ್ದುಪಡಿ ಸಂಖ್ಯೆ : ಸಿಆಸುಇ 148 ಶಿಸನೇ 2010, ದಿನಾಂಕ : 26–04–2011.
7. ತಿದ್ದುಪಡಿ ಸಂಖ್ಯೆ : ಸಿಆಸುಇ 7 ಶಿಸನೇ 2011 ದಿನಾಂಕ :
8. ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅಧಿಸೂಚನೆ ಸಂಖ್ಯೆ : ಸಂವ್ಯಶಾಇ 41 ಶಾಸನ 2006, ದಿನಾಂಕ : 04–07–2011.

**ಪ್ರಸ್ತಾವನೆ :**

ರಾಜ್ಯದ ಸಮಗ್ರ ಅಭಿವೃದ್ಧಿಗಾಗಿ ರಾಜ್ಯದ ಸಂಪೂರ್ಣ ಸಾಮರ್ಥ್ಯವನ್ನು ಸಂಪೂರ್ಣ ಸದ್ಬಳಕೆ ಮಾಡುವ ಉದ್ದೇಶದಿಂದ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರವು ವಿವಿಧ ಆಯೋಗ/ಸಮಿತಿ/ಪ್ರಾಧಿಕಾರ/ಮಿಷನ್/ಕಾರ್ಯಪಡೆಗಳನ್ನು ಹೊಸದಾಗಿ ರಚಿಸಿದ್ದು, ಅಧ್ಯಕ್ಷರುಗಳನ್ನು ನೇಮಿಸಿ ಅವರುಗಳಿಗೆ ಸೂಕ್ತ ಸ್ಥಾನಮಾನವನ್ನು ಸಹ ನೀಡಲಾಗಿದೆ. ಈ ಕಾರ್ಯನಿರ್ವಾಹಕರು/ಪ್ರಾಧಿಕಾರಗಳ ವೆಚ್ಚಗಳನ್ನು ಸಂಬಂಧಪಟ್ಟ ಆಡಳಿತಾತ್ಮಕ ಇಲಾಖೆಗಳು ಭರಿಸುತ್ತಿರುವುದರಿಂದ ಈ ಕಾರ್ಯನಿರ್ವಾಹಕರು/ಪ್ರಾಧಿಕಾರಗಳಿಗೆ ನೀಡಬೇಕಾದ ಸೌಲಭ್ಯಗಳ ಬಗ್ಗೆ ಇಲಾಖೆಗಳು ಸ್ಪಷ್ಟೀಕರಣಗಳನ್ನು ಕೋರಿರುವುದರ ಹಿನ್ನೆಲೆಯಲ್ಲಿ ಕಾರ್ಯನಿರ್ವಾಹಕರು/ಪ್ರಾಧಿಕಾರಗಳಿಗೆ ಸೌಲಭ್ಯಗಳನ್ನು ಒದಗಿಸುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸುವುದು ಅಗತ್ಯವೆಂದು ಮನಗಂಡು ಸಂಬಂಧಪಟ್ಟಂತೆ ಈ ಹಿಂದೆ ಹೊರಡಿಸಲಾಗಿರುವ ಎಲ್ಲಾ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ಕ್ರೋಢೀಕರಿಸಿ ಒಂದೇ ಆದೇಶವನ್ನು ಈ ಕೆಳಕಂಡಂತೆ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 102 ಶಿಸನೇ 2011, ಬೆಂಗಳೂರು, ದಿನಾಂಕ : 23–01–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಸಚಿವರ ಸ್ಥಾನಮಾನವನ್ನು ಹೊಂದಿರುವ ಕಾರ್ಯನಿರ್ವಾಹಕ ಅಥವಾ ಪ್ರಾಧಿಕಾರಿಗಳು/ಆಯೋಗ/ಸಮಿತಿ/ಮಿಷನ್/ಕಾರ್ಯಪಡೆಗಳು ಈ ಕೆಳಕಂಡಂತೆ ಸೌಲಭ್ಯಗಳನ್ನು ಹೊಂದತಕ್ಕದೆಂದು ಆದೇಶಿಸಿದೆ.

1. <u>ವೇತನ ಮತ್ತು ಭತ್ಯೆಗಳು :</u> ಕಾರ್ಯಕಾರಿ ಆದೇಶದ ಮೇರೆಗೆ ಸಚಿವರ : ರಾಜ್ಯ ಸಚಿವರ, ಉಪ ಸಚಿವರ ಸ್ಥಾನಮಾನ ನೀಡಿರುವ ಯಾವುದೇ ಕಾರ್ಯನಿರ್ವಾಹಕ : ಪ್ರಾಧಿಕಾರವು 1956ರ ಕರ್ನಾಟಕ ಸಚಿವರುಗಳ ವೇತನ ಮತ್ತು ಭತ್ಯೆಗಳ ಅಧಿನಿಯಮ ಹಾಗೂ ಸಂಬಂಧಪಟ್ಟ ನಿಯಮಾವಳಿಯನ್ವಯ ವೇತನ, ಭತ್ಯೆ ಇತ್ಯಾದಿಗಳನ್ನು ಪಡೆಯಲು ಅರ್ಹರಿರುತ್ತಾರೆ.
2. <u>ಮನೆ ಬಾಡಿಗೆ :</u> ಅಂತಹ ಕಾರ್ಯನಿರ್ವಾಹಕ : ಪ್ರಾಧಿಕಾರವು ತಮ್ಮ ಅಧಿಕಾರಾವಧಿಯಲ್ಲಿ ಬೆಂಗಳೂರು ನಗರದಲ್ಲಿ ಒಂದು ಸುಸಜ್ಜಿತ ನಿವಾಸವನ್ನು ಹೊಂದಲು ಅಥವಾ ಸುಸಜ್ಜಿತ ನಿವಾಸದ ಬದಲಿಗೆ ಬೆಂಗಳೂರು ನಗರದಲ್ಲಿ ಮಾಸಿಕ ರೂ. 20,000 ಅಥವಾ ಇತರೆ ನಗರಗಳಲ್ಲಿ ಮಾಸಿಕ ರೂ. 15,000 ಮನೆ ಬಾಡಿಗೆ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಲೋಕೋಪಯೋಗಿ ಇಲಾಖೆಯ ಮೌಲ್ಯಮಾಪನಕ್ಕೆ ಒಳಪಟ್ಟು ಬೆಂಗಳೂರು ನಗರದಲ್ಲಿ ಮಾಸಿಕ ರೂ. 40,000 ಹಾಗೂ ಇತರೆ ನಗರಗಳಲ್ಲಿ ಮಾಸಿಕ ರೂ. 20,000 ಗರಿಷ್ಠ ಬಾಡಿಗೆ ಮನೆಯನ್ನು ಪಡೆಯಬಹುದಾಗಿದೆ.
3. <u>ವಾಹನ ಸೌಕರ್ಯ & ಇಂಧನ ಭತ್ಯೆ :</u> ಕಾರ್ಯನಿರ್ವಾಹಕ : ಪ್ರಾಧಿಕಾರವು ತಮ್ಮ ಅಧಿಕಾರಾವಧಿಯಲ್ಲಿ ಚಾಲಕರ ಸಮೇತ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 68 ಶಿವಾನೀ 2008, ದಿನಾಂಕ : 22–08–2008 ರಲ್ಲಿ ನಿಗದಿಪಡಿಸಿರುವ ರೂ. 11.00 ಲಕ್ಷ ಆರ್ಥಿಕ ಮಿತಿಯೊಳಗೆ ವಾಹನವನ್ನು ಸಂಬಂಧಪಟ್ಟ ಆಡಳಿತ ಇಲಾಖೆಯಿಂದ ಆರ್ಥಿಕ ಇಲಾಖೆಯ ಅನುಮತಿಗೆ/ಸಹಮತಿಗೆ ಒಳಪಟ್ಟು ಖರೀದಿಸಬಹುದು ಹಾಗೂ ಸಿಆಸುಇಲಾಖೆಯಿಂದ ಅಧ್ಯಕ್ಷರುಗಳ ಉಪಯೋಗಕ್ಕಾಗಿ ತಾತ್ಕಾಲಿಕವಾಗಿ ನೀಡಿರುವ ವಾಹನಗಳನ್ನು ಆಡಳಿತ ಇಲಾಖೆಯಿಂದ ಹೊಸ ವಾಹನಗಳನ್ನು ಖರೀದಿಸಿದ ನಂತರ ಅತಿಥಿಗೃಹಕ್ಕೆ ಹಿಂದಿರುಗಿಸತಕ್ಕದ್ದು. ಸದರಿ ಅಧ್ಯಕ್ಷರುಗಳು ಮಾಸಿಕ 550 ಲೀಟರ್‌ಗೆ ಸಮಾನವಾದ ಇಂಧನ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಹಾಗೂ **ಅಧ್ಯಕ್ಷರುಗಳು ತಮ್ಮ ವಾಹನಗಳಿಗೆ ಕೆಂಪು ದೀಪವನ್ನು ಅಳವಡಿಸುವಂತಿಲ್ಲ.**
4. <u>ಆಪ್ತ ಸಿಬ್ಬಂದಿ :</u> ಈ ಕಾರ್ಯನಿರ್ವಾಹಕ : ಪ್ರಾಧಿಕಾರಗಳು ಈ ಕೆಳಕಂಡಂತೆ ಆಪ್ತ ಸಿಬ್ಬಂದಿಯನ್ನು ಹೊಂದಬಹುದು.

| | | |
|---|---|---|
| ಅ) ಆಪ್ತ ಕಾರ್ಯದರ್ಶಿ | – | 1 ಹುದ್ದೆ |
| ಆ) 'ಸಿ' ವೃಂದ | – | 2 ಹುದ್ದೆಗಳು |
| ಇ) 'ಡಿ' ವೃಂದ | – | 2 ಹುದ್ದೆಗಳು |
| ಈ) ವಾಹನಚಾಲಕರು | – | 1 ಹುದ್ದೆ |

ಈ ಹುದ್ದೆಗಳನ್ನು ನಿಯೋಜನೆ ಮೂಲಕ ತುಂಬತಕ್ಕದ್ದು. ಅಧ್ಯಕ್ಷರುಗಳು ಇಚ್ಛಿಸುವ ವ್ಯಕ್ತಿಗಳನ್ನು ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಉದ್ದಿಮೆಗಳು ಅಥವಾ ಕೇಂದ್ರ ಸರ್ಕಾರ ಉದ್ದಿಮೆಗಳು ಅಥವಾ ಸ್ವಾಯತ್ತ ಸಂಸ್ಥೆಗಳು, ನಿಗಮ ಅಥವಾ ಸ್ಥಳೀಯ ಸಂಸ್ಥೆಗಳು ಇತ್ಯಾಧಿಗಳಿಂದ ನಿಯೋಜನೆ ಮೂಲಕ ಪಡೆಯಬಹುದು. **ಈ ನೇಮಕಾತಿಯು ಅಧ್ಯಕ್ಷರ ಅವಧಿಯೊಂದಿಗೆ ಮುಕ್ತಾಯಗೊಳ್ಳುವುದು.**

ಮೇಲೆ ತಿಳಿಸಿರುವಂತೆ ಆಪ್ತ ಕಾರ್ಯದರ್ಶಿ ಹುದ್ದೆಯನ್ನು ಗ್ರೂಪ್–ಎ ಅಥವಾ ಗ್ರೂಪ್–ಬಿ ಶ್ರೇಣಿಯ ಅಧಿಕಾರಿಗಳನ್ನು ನಿಯೋಜನೆ ಮೂಲಕ ಭರ್ತಿ ಮಾಡಿಕೊಳ್ಳತಕ್ಕದ್ದು. ಉಳಿದ ಸಿಬ್ಬಂದಿ ಅಂದರೆ ಗ್ರೂಪ್–ಸಿ ಮತ್ತು ಗ್ರೂಪ್–ಡಿ ವರ್ಗದ ನೌಕರರನ್ನು ಆಡಳಿತ ಹಾಗೂ ಇನ್ನಿತರ ಇಲಾಖೆಗಳಲ್ಲಿ ಸೂಕ್ತ ಸಿಬ್ಬಂದಿ **ಇಲ್ಲದಿದ್ದ ಪಕ್ಷದಲ್ಲಿ ಗುತ್ತಿಗೆ ಆಧಾರದ ಮೇಲೆ ಅಧ್ಯಕ್ಷರ ಕಾರ್ಯಾವಧಿವರೆಗೆ ಮಾತ್ರ ನೇಮಿಸಿಕೊಳ್ಳತಕ್ಕದ್ದು.**

ಕರ್ನಾಟಕ ರಾಜ್ಯ ಉದ್ದಿಮೆಗಳ ಮಹೋದ್ಯಮದ ಮಾರ್ಗಸೂಚಿಗಳು (ಅಧ್ಯಕ್ಷರಿಗೆ ಆಪ್ತ ಸಿಬ್ಬಂದಿಗಳನ್ನು ನೀಡುವ ಬಗ್ಗೆ) ಅನ್ವಯಿಸುವುದಿಲ್ಲ ಹಾಗೂ ಮೇಲೆ ನಿಗದಿಪಡಿಸುವ ಸಿಬ್ಬಂದಿ ಮಾದರಿಯು ಅನ್ವಯಿಸುತ್ತದೆ.

5. <u>ದೂರವಾಣಿ :</u> ಕಾರ್ಯನಿರ್ವಾಹಕ : ಪ್ರಾಧಿಕಾರದ ಅಧಿಕೃತ ಉಪಯೋಗಕ್ಕಾಗಿ ಒಂದು ನಿವಾಸ ದೂರವಾಣಿಯನ್ನು ಅವರ ಸ್ವಂತ ಗೃಹದಲ್ಲಿ ಅಥವಾ ಬಾಡಿಗೆ ಮೇಲೆ ಪಡೆದ ನಿವಾಸದಲ್ಲಿ ಒದಗಿಸತಕ್ಕದ್ದು.
6. <u>ಪ್ರವಾಸಭತ್ಯೆ ಮತ್ತು ದಿನಭತ್ಯೆ :</u> ಸಚಿವರುಗಳಿಗೆ ಅನ್ವಯಿಸುವ ಪ್ರವಾಸಭತ್ಯೆ ನಿಯಮಾವಳಿಯನ್ನು ಈ ಕಾರ್ಯನಿರ್ವಾಹಕ : ಪ್ರಾಧಿಕಾರಿಗಳಿಗೆ ವಿಸ್ತರಿಸಬಹುದಾಗಿದೆ. ರಾಜ್ಯದ ಹೊರಗಡೆ ಪ್ರವಾಸವು ಸೇರಿದಂತೆ ಮಾಸಿಕ ಪ್ರವಾಸದ ಅವಧಿಯ 15 ದಿನಗಳಿಗೆ ಮೀರತಕ್ಕದ್ದಲ್ಲ. ರಾಜ್ಯದ ಹೊರಗಡೆ ಪ್ರವಾಸವನ್ನು ಅವಶ್ಯವಿದ್ದಲ್ಲಿ ಮಾತ್ರ ಕೈಗೊಳ್ಳತಕ್ಕದ್ದು ಹಾಗೂ ತಿಂಗಳಲ್ಲಿ ಒಂದು ಬಾರಿಗಿಂತ ಹೆಚ್ಚಾಗಿ ಕೈಗೊಳ್ಳತಕ್ಕದ್ದಲ್ಲ.
7. <u>ವೈದ್ಯಕೀಯ ವೆಚ್ಚ</u> : ಕಾರ್ಯನಿರ್ವಾಹಕ : ಪ್ರಾಧಿಕಾರಗಳ ಅಧ್ಯಕ್ಷರುಗಳು ವೈದ್ಯಕೀಯ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.
8. <u>ಇತರೆ :</u> ಈ ಕಾರ್ಯನಿರ್ವಾಹಕ : ಪ್ರಾಧಿಕಾರಗಳು ರಾಜ್ಯದ ಹೊರಗಡೆ ರಾಜ್ಯ ಅತಿಥಿ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ. ಮುಂದುವರೆದು, ಆದ್ಯತಾಪಟ್ಟಿಯಲ್ಲಿ ಈ ಕಾರ್ಯನಿರ್ವಾಹಕ : ಪ್ರಾಧಿಕಾರಗಳ ದರ್ಜೆಯು, ಇವರುಗಳು ಶಾಸಕರಾಗಿದ್ದಲ್ಲಿ "ವಿಧಾನಸಭಾ ಸದಸ್ಯರು" : ವಿಧಾನ ಪರಿಷತ್ತಿನ ಸದಸ್ಯರು" ಅಡಿಯಲ್ಲಿ ಇರತಕ್ಕದ್ದು.
9. <u>ಕಛೇರಿ ಸ್ಥಳಾವಕಾಶ :</u> ವಿಧಾನಸೌಧ, ವಿಕಾಸ ಸೌಧ ಮತ್ತು ಬಹುಮಹಡಿ ಕಟ್ಟಡಗಳಲ್ಲಿ ಸ್ಥಳಾವಕಾಶ ಲಭ್ಯವಿಲ್ಲದಿದ್ದಲ್ಲಿ ಈ ಕಾರ್ಯನಿರ್ವಾಹಕ : ಪ್ರಾಧಿಕಾರಗಳಿಗೆ ಅಗತ್ಯವಾದ ಕಛೇರಿ ಸ್ಥಳಾವಕಾಶವನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳ ವ್ಯಾಪ್ತಿಗೊಳಪಡುವ ಕಛೇರಿ ಕಟ್ಟಡಗಳಲ್ಲಿ ಒದಗಿಸತಕ್ಕದ್ದು, ಹಾಗು ಪೀಠೋಪಕರಣ ಲೇಖನ ಸಾಮಗ್ರಿ ಇನ್ನಿತರ ಯಂತ್ರೋಪಕರಣಗಳನ್ನು ಮತ್ತು ಇತ್ಯಾದಿ ಸೌಲಭ್ಯಗಳನ್ನು ಆಡಳಿತ ಇಲಾಖೆಗಳೇ ಒದಗಿಸತಕ್ಕದ್ದು.

ಈ ಬಗ್ಗೆ ಸಂಪೂರ್ಣ ವೆಚ್ಚವನ್ನು ಸಂಬಂಧಪಟ್ಟ ಮಂಡಳಿ : ನಿಗಮ ಇತ್ಯಾದಿಗಳು ಭರಿಸತಕ್ಕದ್ದು, ಹಾಗೂ ನಷ್ಟದಲ್ಲಿರುವ ಮಂಡಳಿ : ನಿಗಮಗಳಿಗೆ ಸಂಬಂಧಿಸಿದಂತೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ಲಭ್ಯವಿರುವ ವಾರ್ಷಿಕ ಆಯವ್ಯಯದ ಅನುದಾನದಿಂದ ಆರ್ಥಿಕ ಸಹಾಯವನ್ನು ಒದಗಿಸುವ ಬಗ್ಗೆ ತೀರ್ಮಾನ ಕೈಗೊಳ್ಳತಕ್ಕದ್ದು. ಈ ಉದ್ದೇಶಕ್ಕಾಗಿ ಪ್ರತ್ಯೇಕವಾಗಿ ಹೆಚ್ಚುವರಿ ಆಯವ್ಯಯ ಅನುದಾನವನ್ನು ಮಂಜೂರು ಮಾಡಲಾಗುವುದಿಲ್ಲ. ಸರ್ಕಾರವು ಆಗಿಂದ್ದಾಗ್ಗೆ ಹೊರಡಿಸಿರುವ ಮಿತವ್ಯಯ ಆದೇಶವನ್ನು ಪಾಲಿಸಲು ಕ್ರಮ ಕೈಗೊಳ್ಳುವುದು. ಹಾಗೂ ಯಾವ ಉದ್ದೇಶಗಳಿಗೆ ಕಾರ್ಯಪಡೆ ರಚನೆಯಾಗಿದೆಯೋ ಆ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ನಿಗದಿಪಡಿಸಿದ ಅವಧಿಯೊಳಗೆ ಗುರಿ ಸಾಧಿಸಲು ಸಂಬಂಧಪಟ್ಟ ಆಡಳಿತ ಇಲಾಖೆಗಳು ಎಲ್ಲಾ ರೀತಿಯ ಸಹಕಾರ ಮಾಹಿತಿ ಹಾಗೂ ಸೌಲಭ್ಯಗಳನ್ನು ಇವುಗಳಿಗೆ ಒದಗಿಸತಕ್ಕದ್ದು.

ಸರ್ಕಾರವು ಈಗಾಗಲೇ ರಚಿಸಲಾಗಿರುವ ಹಾಗೂ ಮುಂದೆ ರಚಿಸಲಿರುವ ಇಂತಹ ಎಲ್ಲಾ ಕಾರ್ಯನಿರ್ವಾಹಕ : ಪ್ರಾಧಿಕಾರಗಳಿಗೆ ಸಚಿವರ ಸ್ಥಾನಮಾನ ನೀಡಿದ ನಂತರ ಮೇಲ್ಕಂಡ ಸೌಲಭ್ಯಗಳು, ಷರತ್ತು ಮತ್ತು ನಿಬಂಧನೆಗಳು ಅನ್ವಯವಾಗುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ : ಆಇ 820 ವೆಚ್ಚ–12/2011 ದಿನಾಂಕ : 01–12–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಚ್. ಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ (ರಾಜ್ಯ ಶಿಷ್ಟಾಚಾರ)

ಪಿ.ಆರ್. 459

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್.ಎನ್. ಜಯರಾಮ್, ಐ.ಎ.ಎಸ್., ಇವರ ಕಡ್ಡಾಯ ನಿರೀಕ್ಷಣಾ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 571 ಎಸ್ಎಎಸ್ 2011, ದಿನಾಂಕ : 09–11–2011.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 660 ಎಸ್ಎಎಸ್ 2011, ದಿನಾಂಕ : 31–12–2011.
3. ಶ್ರೀ ಎಸ್.ಎನ್.ಜಯರಾಮ್, ಐ.ಎ.ಎಸ್., ಇವರ ಪತ್ರ ಸಂಖ್ಯೆ : ಕೆಹೆಚ್‌ಬಿ/ಹೆಚ್‌ಸಿ/ಪಿಎಸ್/2011–12, ದಿನಾಂಕ : 04–01–2012.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 09–11–2011ರ ಅಧಿಸೂಚನೆಯಲ್ಲಿ ಶ್ರೀ ಎಸ್.ಎನ್. ಜಯರಾಮ್, ಐ.ಎ.ಎಸ್., ಇವರನ್ನು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಹುದ್ದೆಯಿಂದ ವರ್ಗಾಯಿಸಿ ಆದೇಶಿಸಿದ್ದರ ಮೇರೆಗೆ ಸದರಿಯವರು ದಿನಾಂಕ : 15–11–2011ರ ಅಪರಾಹ್ನ ಸದರಿ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಟ್ಟು, ದಿನಾಂಕ : 16–11–2011ರ ಪೂರ್ವಾಹ್ನ ಸಿಆಸು ಇಲಾಖೆಯಲ್ಲಿ ವರದಿ ಮಾಡಿಕೊಂಡು ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ತದನಂತರ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ : 31–12–2011ರ ಅಧಿಸೂಚನೆಯಲ್ಲಿ ಶ್ರೀಯುತರನ್ನು ಆಯುಕ್ತರು, ಕರ್ನಾಟಕ ಗೃಹ ಮಂಡಳಿ ಹುದ್ದೆಗೆ ನೇಮಿಸಿದ್ದು, ಈ ಆದೇಶದ ಮೇರೆಗೆ ದಿನಾಂಕ : 03–01–2012ರಂದು ವಸತಿ ಇಲಾಖೆಯು ಹೊರಡಿಸಿದ ಮರುನೇಮಕಾತಿ ಆದೇಶದನ್ವಯ ಶ್ರೀ ಎಸ್.ಎನ್.ಜಯರಾಮ್, ಐ.ಎ.ಎಸ್., ಇವರು ದಿನಾಂಕ : 04–01–2012ರ ಪೂರ್ವಾಹ್ನ ಆಯುಕ್ತರು, ಕರ್ನಾಟಕ ಗೃಹ ಮಂಡಳಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎಸ್.ಎನ್. ಜಯರಾಮ್, ಐ.ಎ.ಎಸ್., ಇವರು ದಿನಾಂಕ : 16–11–2011 ರಿಂದ 03–01–2012 ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ನಿಟ್ಟಿನಲ್ಲಿ ಸೂಕ್ತ ಆದೇಶ ಹೊರಡಿಸಲು ಕೋರಿದ್ದಾರೆ. ಸರ್ಕಾರವು ಪ್ರಕರಣವನ್ನು ಪರಿಶೀಲಿಸಿದೆ. ಆದುದರಿಂದ ಈ ಕೆಳಕಂಡ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 11 ಎಸ್ಐಎಸ್ 2012, ಬೆಂಗಳೂರು, ದಿನಾಂಕ : 25–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಎನ್. ಜಯರಾಮ್, ಐ.ಎ.ಎಸ್., ಇವರು ದಿನಾಂಕ : 16–11–2011 ರಿಂದ 03–01–2012ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸರ್ಕಾರವು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್)ರ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಸಕ್ರಮಗೊಳಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ/1/ಟಿಎಫ್‌ಪಿ/96, ದಿನಾಂಕ : 10–07–1996ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಯು.ಹೆಚ್.ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–1)

ಪಿ.ಆರ್. 460

## ಶಿಕ್ಷಣ ಸಚಿವಾಲಯ

**ವಿಷಯ :** ಶಿವಮೊಗ್ಗ ನಗರದ ಮೌಲ್ಯಮಾಪನ ಕೇಂದ್ರದ ಎಸ್.ಎಸ್.ಎಲ್.ಸಿ. ಪರೀಕ್ಷಾ ಉತ್ತರ ಪತ್ರಿಕೆಗಳು ಬೆಂಕಿಗೆ ಆಹುತಿಯಾದ ಪ್ರಕರಣದಲ್ಲಿ ಕರ್ತವ್ಯ ನಿರ್ಲಕ್ಷ್ಯತೆ ತೋರಿದ ಅಧಿಕಾರಿಗಳ ವಿರುದ್ಧ ಕರ್ನಾಟಕ ನಾಗರೀಕ (ಸಿಸಿಎ) ಸೇವಾ ನಿಯಮಾವಳಿಗಳ ನಿಯಮ–13 ರಡಿಯಲ್ಲಿ ಜಂಟಿ ಶಿಸ್ತು ಕ್ರಮ – ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು ಇವರ ಪತ್ರ ಸಂಖ್ಯೆ: ದಿನಾಂಕ: 16–04–2011.
2. ಸರ್ಕಾರದ ಪತ್ರ ಸಂಖ್ಯೆ: ಇಡಿ 28 ಡಿಜಿಪಿ 2011, ದಿನಾಂಕ: 19–04–2011.
3. ಸರ್ಕಾರದ ಆದೇಶ ಸಂಖ್ಯೆ: ಇಡಿ 28 ಡಿಜಿಪಿ 2011 ದಿನಾಂಕ: 19–04–2011.
4. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು ಇವರ ಪತ್ರ ಸಂಖ್ಯೆ: ದಿನಾಂಕ: 16–06–2011.
5. ಕಾರಣ ಕೇಳುವ ನೋಟೀಸು ಸಂಖ್ಯೆ: ಇಡಿ 28 ಡಿಜಿಪಿ 2011, ದಿನಾಂಕ: 12–08–2011.
6. ಶ್ರೀ ಜಿ.ಎಸ್. ಪರಮಶಿವಪ್ಪ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 02–09–2011.
7. ಶ್ರೀ ಟಿ.ಎನ್. ಕಮಲಾಕರ, ಕ್ಷೇತ್ರ ಶಿಕ್ಷಣಾಧಿಕಾರಿ, ಶಿವಮೊಗ್ಗ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 02–09–2011.
8. ಶ್ರೀಮತಿ ಆರ್. ಗೀತಾ, ವಿಷಯ ಪರಿವೀಕ್ಷಕರು, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 06–09–2011.

9. ಶ್ರೀಮತಿ ಸುಮಂಗಳಾ ಪಿ. ಕುಚಿನಾಡ, ಶಿಕ್ಷಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಇಲಾಖೆ, ಶಿವಮೊಗ್ಗ. ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 21–09–2011.

10. ಸರ್ಕಾರದ ಆದೇಶ ಸಂಖ್ಯೆ:: ಇಡಿ 28 ಡಿಜಿಪಿ 2011 ದಿನಾಂಕ: 31–12–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ ಶಿವಮೊಗ್ಗ ನಗರದ ಶ್ರೀ ಬಸವೇಶ್ವರ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಎಸ್.ಎಸ್.ಎಲ್.ಸಿ. ಮೌಲ್ಯಮಾಪನ ಕೇಂದ್ರದಲ್ಲಿ ಪರೀಕ್ಷಾ ಉತ್ತರ ಪತ್ರಿಕೆಗಳು ಬೆಂಕಿಗೆ ಆಹುತಿಯಾದ ಪ್ರಕರಣದಲ್ಲಿ ಕರ್ತವ್ಯ ನಿರ್ಲಕ್ಷ್ಯತೆ ತೋರಿದ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತಂತೆ ವರದಿಯೊಂದಿಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು.

1. ಶ್ರೀ ಜಿ.ಎಸ್. ಪರಮಶಿವಪ್ಪ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
2. ಶ್ರೀಮತಿ ಸುಮಂಗಳಾ ಪಿ. ಕುಚಿನಾಡ, ಶಿಕ್ಷಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
3. ಶ್ರೀಮತಿ ಆರ್. ಗೀತಾ, ವಿಷಯ ಪರಿವೀಕ್ಷಕರು, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
4. ಶ್ರೀ ಟಿ.ಎನ್. ಕಮಲಾಕರ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
5. ಶ್ರೀಮತಿ ಶಾಂತಕುಮಾರಿ, ಮುಖ್ಯ ಶಿಕ್ಷಕಿ, ಶ್ರೀ ಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ.

ಮೇಲ್ಕಂಡ ಅಧಿಕಾರಿಗಳ ಪೈಕಿ, ಕ್ರಮ ಸಂಖ್ಯೆ: 5 ರಲ್ಲಿರುವ ಶ್ರೀಮತಿ ಶಾಂತಕುಮಾರಿ, ಇವರು ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಯ ಶಿಕ್ಷಕರಾಗಿದ್ದು, ಸದರಿಯವರು ಮೌಲ್ಯಮಾಪನ ಕೇಂದ್ರದ ಸುರಕ್ಷತೆ ವಿಷಯದಲ್ಲಿ ಕ್ಯಾಂಪ್ ಕಸ್ಟೋಡಿಯನ್ ಅನುಮತಿ ಪಡೆಯದೇ ಇಲಾಖೆಯ ಗಮನಕ್ಕೆ ತಾರದೇ ಸ್ವಯಂ ನಿರ್ಧಾರ ತೆಗೆದುಕೊಂಡು ಬೆಂಕಿ ಅನಾಹುತ ಜರುಗಲು ಕಾರಣವಾಗಿದ್ದು, ಇವರ ವಿರುದ್ಧ ಸೂಕ್ತ ಕ್ರಮ ವಹಿಸುವಂತೆ ಸಂಬಂಧಿಸಿದ ಶಿಕ್ಷಣ ಸಂಸ್ಥೆಗೆ ನಿರ್ದೇಶನ ನೀಡುವಂತೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ನಿರ್ದೇಶನ ನೀಡಲಾಗಿದೆ.

ಶಿವಮೊಗ್ಗ ನಗರದ ಶ್ರೀ ಬಸವೇಶ್ವರ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಎಸ್.ಎಸ್.ಎಲ್.ಸಿ. ಮೌಲ್ಯ ಮಾಪನ ಕೇಂದ್ರದಲ್ಲಿ 2011ರ ಎಸ್.ಎಸ್.ಎಲ್.ಸಿ. ತೃತೀಯ ಭಾಷೆ ಹಿಂದಿ 61 (ಹೆಚ್) ನ ಮೈಸೂರು ಜಿಲ್ಲೆಯ ಉತ್ತರ ಪತ್ರಿಕೆಗಳನ್ನು ಮೌಲ್ಯ ಮಾಪನ ಮಾಡಲು ಶೇಖರಿಸಿಡಲು ಈ ಉತ್ತರ ಪತ್ರಿಕೆಗಳನ್ನು ಸಂಬಂಧಪಟ್ಟ ಕ್ಯಾಂಪ್ ಕಸ್ಟೋಡಿಯನ್ ಆದ ಶ್ರೀಮತಿ ಸುಮಂಗಲಾ ಪಿ. ಕುಚಿನಾಡ ಶಿಕ್ಷಣಾಧಿಕಾರಿ, ಉಪ ನಿರ್ದೇಶಕರ ಕಛೇರಿ ಶಿವಮೊಗ್ಗ ಇವರು ದಿನಾಂಕ: 13–04–2011 ರಂದು ರಾತ್ರಿ 8–30ಕ್ಕೆ ಸ್ವೀಕರಿಸಿ ಶೇಖರಣೆ ಮಾಡಿದ್ದು ಈ ಮೌಲ್ಯಮಾಪನ ಕೇಂದ್ರದ ಸುರಕ್ಷತೆ ಜವಾಬ್ದಾರಿಯನ್ನು ಸದರಿಯವರಿಗೆ ವಹಿಸಲಾಗಿದ್ದರೂ ಸಹ ಶ್ರೀಮತಿ ಸುಮಂಗಲಾ ಪಿ. ಕುಚಿನಾಡ ಇವರು ಗೌಪ್ಯ ಸಾಮಾಗ್ರಿಗಳನ್ನು ಸಂಗ್ರಹಿಸುವ ಮುನ್ನ ಯೋಗ್ಯ ಕೊಠಡಿಯನ್ನು ಆಯ್ಕೆ ಮಾಡದೇ ಮೈಸೂರು ಜಿಲ್ಲೆಯಿಂದ ಗೌಪ್ಯ ವಸ್ತುಗಳು ಶಿವಮೊಗ್ಗಕ್ಕೆ ಬರುವ ತನಕ ಕೊಠಡಿ ಪರಿಶೀಲನೆ ಮಾಡದೇ ಕರ್ತವ್ಯ ಲೋಪವೆಸಗಿರುತ್ತಾರೆಂದು ವರದಿ ಮಾಡಿರುವುದನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಪ್ರಕರಣವನ್ನು ಗಂಭೀರವಾಗಿ ಪರಿಗಣಿಸಿದ್ದು, ವಿದ್ಯಾರ್ಥಿಗಳ ಶೈಕ್ಷಣಿಕ ಹಿತ ದೃಷ್ಟಿಯಿಂದ ಹಾಗೂ ಪರೀಕ್ಷಾ ಕೇಂದ್ರದ ಸುರಕ್ಷತೆಯಲ್ಲಿನ ಲೋಪ ದೋಷಗಳ ಹಿನ್ನೆಲೆಯಲ್ಲಿ ಸಾಕಷ್ಟು ಮುಂಜಾಗ್ರತೆವಹಿಸದೆ ಇರುವ ಅಧಿಕಾರಿ/ನೌಕರರನ್ನು ಶಿಸ್ತು ಕ್ರಮಕ್ಕೆ ಒಳಪಡಿಸಬೇಕಾಗುವುದು ಅತ್ಯವಶ್ಯವೆಂದು ನಿರ್ಧರಿಸಿ, ಈ ಪ್ರಕರಣದಲ್ಲಿ ಶ್ರೀಮತಿ ಸುಮಂಗಲಾ ಪಿ. ಕುಚಿನಾಡ, ಕ್ಯಾಂಪ್ ಕಸ್ಟೋಡಿಯನ್, ಶಿಕ್ಷಣಾಧಿಕಾರಿ ಉಪನಿರ್ದೇಶಕರ ಕಛೇರಿ, ಶಿವಮೊಗ್ಗ, ಇವರ ಕರ್ತವ್ಯ ನಿರ್ಲಕ್ಷ್ಯತನ, ಬೇಜವಾಬ್ದಾರಿತನ, ಕರ್ತವ್ಯ ಲೋಪದಿಂದ ಈ ಘಟನೆ ಜರುಗಿದ್ದು ಈ ಘಟನೆಗೆ ಸದರಿಯವರು ಜವಾಬ್ದಾರರೆಂದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಇವರ ಮೇಲೆ ಶಿಸ್ತು ಕ್ರಮ ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರ ನಿಯಮ –10(1)ಡಿ ಹಾಗೂ 10(3) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಇವರು ಈ ಪ್ರಕರಣದಲ್ಲಿ ಕರ್ತವ್ಯ ನಿರ್ಲಕ್ಷ್ಯತೆ ತೋರಿದ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ–II ಮತ್ತು 13 ರಡಿಯಲ್ಲಿ ಜಂಟಿ ಶಿಸ್ತುಕ್ರಮ ಕೈಗೊಳ್ಳಲು ಕರಡು ದೋಷಾರೋಪಣಾ ಪಟ್ಟಿಯನ್ನು ಅನುಬಂಧ – I ರಿಂದ 4 ನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

1. ಶ್ರೀ ಜಿ.ಎಸ್. ಪರಮಶಿವಪ್ಪ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
2. ಶ್ರೀಮತಿ ಸುಮಂಗಳಾ ಪಿ. ಕುಚಿನಾಡ, ಶಿಕ್ಷಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
3. ಶ್ರೀಮತಿ ಆರ್. ಗೀತಾ, ವಿಷಯ ಪರಿವೀಕ್ಷಕರು, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
4. ಶ್ರೀ ಟಿ.ಎನ್. ಕಮಲಾಕರ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಇವರ ಪ್ರಸ್ತಾವನೆಯನ್ನು ಆಧರಿಸಿ ಪ್ರಕರಣದ ಗಂಭೀರತೆಯ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಆರೋಪಿತರೆಂದು ಗುರುತಿಸಲಾಗಿರುವ ಒಬ್ಬ ಉಪ ನಿರ್ದೇಶಕರು ಸೇರಿದಂತೆ ಒಟ್ಟು 04 ಅಧಿಕಾರಿಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ–II ಮತ್ತು 13 ರಡಿ ಜಂಟಿ ಶಿಸ್ತುಕ್ರಮ ಜರುಗಿಸಲು ಕಾರಣ ಕೇಳುವ ನೋಟೀಸುಗಳನ್ನು ಜಾರಿಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (06) ರಿಂದ (09) ರವರೆಗೆ ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದು ತಮ್ಮನ್ನು ಆರೋಪದಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ.

ಈ ಮಧ್ಯೆ ಶ್ರೀಮತಿ ಸುಮಂಗಲ ಪಿ. ಕುಚಿನಾಡ, ಹಿಂದಿನ ಶಿಕ್ಷಣಾಧಿಕಾರಿ, ಇವರು ತಮ್ಮ ಅಮಾನತ್ತು ಅವಧಿ ನಾಲ್ಕು ತಿಂಗಳಿಗೂ ಹೆಚ್ಚುಕಾಲ ಮೀರಿರುವುದರಿಂದ ನಿಯಮಾನುಸಾರ ಪ್ರಕರಣವನ್ನು ಪುನರ್ ಪರಿಶೀಲಿಸಿ ತಮ್ಮನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ಸರ್ಕಾರದಲ್ಲಿ ಮನವಿ ಸಲ್ಲಿಸಿದ್ದನ್ನು ಪರಿಗಣಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (10) ರಲ್ಲಿ ಸದರಿಯವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿರಿಸಿ, ಸೇವೆಗೆ ಪುನರ್ ಸ್ಥಾಪಿಸಿ ಅವರನ್ನು ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಚಿಕ್ಕಮಗಳೂರು ಇಲ್ಲಿ ಖಾಲಿ ಇರುವ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಲಾಗಿತ್ತು.

ಈ ಪ್ರಕರಣದಲ್ಲಿ ಆರೋಪಿತ ಅಧಿಕಾರಿಗಳು ಸಲ್ಲಿಸಿರುವ ತಮ್ಮ ಪ್ರತಿರಕ್ಷಣಾ ಹೇಳಿಕೆಗಳಲ್ಲಿ ಅವರುಗಳ ಮೇಲಿನ ಆರೋಪಗಳನ್ನು ಅಲ್ಲಗಳೆದಿರುವುದರಿಂದ ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ವಿಚಾರಣೆ ಮಾಡುವುದು ಸೂಕ್ತವೆಂದು ನಿರ್ಣಯಿಸಿ, ಕರ್ನಾಟಕ ನಾಗರೀಕ

ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ–II ಹಾಗೂ 13 ರ ಅಡಿಯಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಲು ಸೂಕ್ತವೆಂದು ನಿರ್ಧರಿಸಿ ಅದರಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 28 ಡಿಜಿಪಿ 2011, ಬೆಂಗಳೂರು, ದಿನಾಂಕ: 24–01–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಶಿವಮೊಗ್ಗ ನಗರದ ಶ್ರೀ ಬಸವೇಶ್ವರ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಎಸ್.ಎಸ್.ಎಲ್.ಸಿ. ಮೌಲ್ಯಮಾಪನ ಕೇಂದ್ರದಲ್ಲಿ ಪರೀಕ್ಷಾ ಉತ್ತರ ಪತ್ರಿಕೆಗಳು ಬೆಂಕಿಗೆ ಆಹುತಿಯಾದ ಪ್ರಕರಣದಲ್ಲಿ ಕರ್ತವ್ಯ ನಿರ್ಲಕ್ಷ್ಯತೆ ತೋರಿದ ಈ ಕೆಳಕಂಡ ಅಧಿಕಾರಿಗಳ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ–II ಮತ್ತು 13 ರಡಿ ಇಲಾಖಾ ವಿಚಾರಣೆ ನಡೆಸಲು ನಿಯಮ–II (2) ರಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಶ್ರೀ ವಸಂತ ಹೆಚ್. ಮುಳಸಾವಳಗಿ, ನಿವೃತ್ತ ಸಿವಿಲ್ ನ್ಯಾಯಾಧೀಶರು, (ಹಿರಿಯ ವಿಭಾಗ) ಜೆ.2–ಬಿ–201, ಎನ್.ಜೆ.ವಿ. ಕಾಂಪ್ಲೆಕ್ಸ್, ಕೋರಮಂಗಲ, ಬೆಂಗಳೂರು, ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ನಿಯಮ–II (5) ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ವಿ. ಪದ್ಮನಾಭ, ಉಪ ನಿರ್ದೇಶಕರು (ಕೆ.ಎಸ್.ಕ್ಯೂ.ಎ.ಓ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶಿಸಿದೆ.

1. ಶ್ರೀ ಜಿ.ಎಸ್. ಪರಮಶಿವಪ್ಪ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
2. ಶ್ರೀಮತಿ ಸುಮಂಗಳಾ ಪಿ. ಕುಚಿನಾಡ, ಶಿಕ್ಷಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
3. ಶ್ರೀಮತಿ ಆರ್. ಗೀತಾ ವಿಷಯ ಪರಿವೀಕ್ಷಕರು, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.
4. ಶ್ರೀ ಟಿ.ಎನ್. ಕಮಲಾಕರ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.

ವಿಚಾರಣೆ ನಡೆಸಲು ಸ್ಥಳಾವಕಾಶ ಹಾಗೂ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸೇವೆಯನ್ನು ವಿಚಾರಣಾಧಿಕಾರಿಗೆ ಒದಗಿಸಲು ಹಾಗೂ ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ ನಂತರ ಅವರಿಗೆ ಸಂಭಾವನೆಯನ್ನು ಮತ್ತು ಸಾರಿಗೆ ಭತ್ಯೆಯನ್ನು ಸೇರಿದಂತೆ ಒಟ್ಟು ರೂ. 15,000/– (ರೂ. ಹದಿನೈದು ಸಾವಿರ ಮಾತ್ರ) ಮಂಜೂರು ಮಾಡುವಂತೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಸೂಚಿಸಿದೆ.

ವಿಚಾರಣಾಧಿಕಾರಿಗಳು ಪ್ರತಿ ಆರೋಪದ ಬಗ್ಗೆ ನಿಯಮಾನುಸಾರ ವಿಚಾರಣೆ ನಡೆಸಿ, ಸ್ಪಷ್ಟ ನಿರ್ಣಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ಈ ಆದೇಶ ತಲುಪಿದ 2 ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಪಿ.ಆರ್. ನಂ. 461

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಆಡಳಿತ)

## ಶಿಕ್ಷಣ ಸಚಿವಾಲಯ

**ವಿಷಯ :** ಶಿಕ್ಷಣ ಇಲಾಖೆಯ ಉನ್ನತ ಶಿಕ್ಷಣ ವಲಯದಡಿ ಬರುವ ತಾಂತ್ರಿಕ ಶಿಕ್ಷಣ ಇಲಾಖೆಗೆ 2011–12ನೇ ಸಾಲಿನ ಮುಂದುವರಿಕಾ ಕಾರ್ಯಕ್ರಮಗಳ ಅನುಷ್ಠಾನಕ್ಕೆ 3ನೇ ತ್ರೈಮಾಸಿಕ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 13 ಹೆಚ್‌ಪಿಟಿ 2011, ದಿನಾಂಕ: 02–04–2011/09–12–2011.
2. ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ/02/ಬಿಎಲ್‌ಡಿ/2011, ದಿನಾಂಕ: 28–12–2011.

**ಪ್ರಸ್ತಾವನೆ:**

ಮೇಲೆ 1ರಲ್ಲಿ ಓದಲಾದ ಆದೇಶದಲ್ಲಿ ಶಿಕ್ಷಣ ಇಲಾಖೆಯ ಉನ್ನತ ಶಿಕ್ಷಣ ವಲಯದಡಿ ಬರುವ ತಾಂತ್ರಿಕ ಶಿಕ್ಷಣ ಇಲಾಖೆಗೆ 2011–12ನೇ ಸಾಲಿನ ರಾಜ್ಯ ವಲಯದ ಮುಂದುವರಿಕಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡಲಾಗಿದೆ.

ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆಯಡಿ ಮುಂದುವರೆಯುತ್ತಿರುವ ಯೋಜನಾ ಕಾರ್ಯಕ್ರಮಗಳನ್ನು 2011–12ನೇ ಸಾಲಿಗೆ ಮುಂದುವರೆಸಿ, ಅನುಮತಿ ಆದೇಶ ನೀಡಿದ್ದು, 2011–12ನೇ ಸಾಲಿನ ಅಕ್ಟೋಬರ್ 2011ರ ಮಾಹೆಯವರೆಗೆ ಯೋಜನೆಯಡಿ ವಿವಿಧ ಯೋಜನೆಗಳಡಿ ಬಿಡುಗಡೆ ಮಾಡಲಾದ ಆಯವ್ಯಯ ಹಾಗೂ ಭರಿಸಲಾದ ಖರ್ಚಿನ ವಿವರ ಹಾಗೂ ಕ್ರೋಢೀಕೃತ ಬಳಕೆ ಪ್ರಮಾಣ ಪತ್ರ ಸಲ್ಲಿಸಿದ್ದು, ಬಾಕಿ ಅನುದಾನ ಬಿಡುಗಡೆ ಮಾಡಲು ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 13 ಹೆಚ್‌ಪಿಟಿ 2011 ದಿನಾಂಕ: 24–01–2012**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ತಾಂತ್ರಿಕ ಶಿಕ್ಷಣ ಇಲಾಖೆಯ ರಾಜ್ಯ ವಲಯದ ಯೋಜನಾ ಕಾರ್ಯಕ್ರಮಗಳಿಗೆ 3ನೇ ತ್ರೈಮಾಸಿಕ ಕಂತಿನಲ್ಲಿ ಪ್ರಚಲಿತ ನಿಯಮಗಳನ್ನು ಪಾಲಿಸುವ ಷರತ್ತುಗಳೊಂದಿಗೆ ತಾಂತ್ರಿಕ ಶಾಲೆಗಳು ಕಟ್ಟಡಗಳು ಪಾಲಿಟೆಕ್ನಿಕ್ ಮತ್ತು ಇಂಜಿನಿಯರಿಂಗ್ ಕಾಲೇಜುಗಳ ಲೆಕ್ಕ ಶೀರ್ಷಿಕೆ 2203–00–800–0–06–59 ರಡಿ ಬಾಕಿ ಉಳಿದ ರೂ. 45.00 ಲಕ್ಷಗಳನ್ನು ಬಿಡುಗಡೆ ಮಾಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಇವರಿಗೆ ಅನುಮತಿ ನೀಡಿದೆ. ಗಜೇಂದ್ರಗಡ ಸರ್ಕಾರಿ ಪಾಲಿಟೆಕ್ನಿಕ್ ಮಹಿಳಾ ಹಾಸ್ಟೆಲ್‌ಗೆ ನಿವೇಶನ ಖರೀದಿಗೆ ಅನುದಾನವನ್ನು ಈ ಅನುದಾನದಲ್ಲಿಯೇ ಭರಿಸಲು ಸೂಚಿಸಿದೆ. ಪ್ರಚಲಿತ ನಿಯಮಗಳೆಲ್ಲವನ್ನೂ ಚಾಚೂ ತಪ್ಪದೇ ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 843–ವೆಚ್ಚ–8 2011, ದಿನಾಂಕ: 07–12–2011 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಪಿ.ಆರ್. ನಂ. 462

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

## ಶಿಕ್ಷಣ ಸಚಿವಾಲಯ

**ವಿಷಯ :** 2011–12ನೇ ಸಾಲಿನ ವಾರ್ಷಿಕ ಯೋಜನೆಯಡಿ ರಾಜ್ಯ ಸರ್ಕಾರದಿಂದ One Time ACA ರದಡಿಯಲ್ಲಿ ಸಲ್ಲಿಸಲಾದ ಪ್ರಸ್ತಾವನೆಗಳಿಗೆ ಕೇಂದ್ರ ಸರ್ಕಾರದಿಂದ ಅನುದಾನ ಸಂದಾಯವಾದ ಬಗ್ಗೆ.

**ಓದಲಾಗಿದೆ :** 1. ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 26 ಎಫ್ಆರ್ಓ 2011, ದಿನಾಂಕ: 30–11–2011.

**ಪ್ರಸ್ತಾವನೆ:**

ಮೇಲೆ 1ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು 2011–12ನೇ ಸಾಲಿನ ವಾರ್ಷಿಕ ಯೋಜನೆಯಡಿ ರಾಜ್ಯ ಸರ್ಕಾರದಿಂದ One Time ACA ರದಡಿಯಲ್ಲಿ ಸಲ್ಲಿಸಲಾದ ಸರ್ಕಾರಿ ಪಾಲಿಟೆಕ್ನಿಕ್ ಅಪ್‌ಗ್ರೇಡೇಷನ್‌ಗೆ ರೂ. 20.00 ಕೋಟಿಯ ಪ್ರಸ್ತಾವನೆಯನ್ನು ಅನುಮೋದಿಸಿದ್ದು, ಕೇಂದ್ರ ಸರ್ಕಾರದಿಂದ ರೂ. 6.00 ಕೋಟಿ ಅನುದಾನ ಸಂದಾಯ ಮಾಡಲು ಅಂದರೆ, ಒಟ್ಟಾರೆಯ ಶೇಕಡ 30ರಷ್ಟು ಕೇಂದ್ರ ಸರ್ಕಾರದ ಪಾಲಿನ ಅನುದಾನವನ್ನು ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡಲು ಆರ್ಥಿಕ ಮಂತ್ರಾಲಯ, ಭಾರತ ಸರ್ಕಾರ, ಮಂಜೂರಾತಿ ನೀಡಿದೆಯೆಂದು ತಿಳಿಸಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 69 ಹೆಚ್‌ಪಿಸಿ 2011 ಬೆಂಗಳೂರು, ದಿನಾಂಕ: 16–01–2012**

2011–12ನೇ ಸಾಲಿನ ವಾರ್ಷಿಕ ಯೋಜನೆಯಡಿ ರಾಜ್ಯ ಸರ್ಕಾರದಿಂದ One Time ACA ರದಡಿಯಲ್ಲಿ ಸಲ್ಲಿಸಲಾದ ಅನುಬಂಧ ಲಗತ್ತಿಸಿದ ಸರ್ಕಾರಿ ಪಾಲಿಟೆಕ್ನಿಕ್‌ಗಳ ಬಲವರ್ಧನಾ ಪ್ರಸ್ತಾವನೆಯನ್ನು ಅನುಮೋದಿಸಿದೆ. ಈ ಸಂಬಂಧ ಸರ್ಕಾರಿ ಪಾಲಿಟೆಕ್ನಿಕ್ ಅಪ್‌ಗ್ರೇಡೇಷನ್ One Time ACA ಲೆಕ್ಕಶೀರ್ಷಿಕೆ 2203–00–105–0–09 ರಡಿ ಕೇಂದ್ರದ ಪಾಲು ಶೇಕಡ 30ರಷ್ಟು ಅಂದರೆ ರೂ. 6.00 ಕೋಟಿಗಳನ್ನು (ರೂ. ಆರು ಕೋಟಿ) ಒದಗಿಸಿದ್ದು. ಇದನ್ನು ಕೆಳಕಂಡ ಷರತ್ತುಗಳನ್ನು ಪಾಲಿಸಿ, ಬಿಡುಗಡೆ ಮಾಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಇವರಿಗೆ ಅನುಮತಿ ನೀಡಿದೆ.

ಷರತ್ತುಗಳು:

1. ಕೆ.ಟಿ.ಪಿ.ಪಿ. ಮತ್ತು ಇತರೇ ಪ್ರಚಲಿತ ಖರೀದಿ ನಿಯಮಗಳನ್ನು ಚಾಚೂತಪ್ಪದೇ ಪಾಲಿಸುವುದು.
2. ಪ್ರಕ್ರಿಯೆಯನ್ನು 2012 ಮಾರ್ಚ್ 15 ರೊಳಗಾಗಿ ನಿಯಮಾನುಸಾರ ಮುಗಿಸಿ, ವೆಚ್ಚವನ್ನು ಈ ಅವಧಿಯೊಳಗಾಗಿ ಮುಗಿಸುವುದು.
3. ಅನುಮೋದಿತ ಕ್ರಿಯಾ ಯೋಜನೆಗೆ ಬದಲಾವಣೆ ಹಾಗೂ ಆಡಳಿತಾತ್ಮಕ ಅನುಮೋದನೆಯನ್ನು ಪ್ರತ್ಯೇಕವಾಗಿ ಸರ್ಕಾರದಿಂದ ಪಡೆಯುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 950 ವೆಚ್ಚ–8 2011, ದಿನಾಂಕ: 12–01–2012ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

## ANNEXURE FOR G.O. NO. ED 69 HPC 2011, DATED: 16-01-2012

### PROJECT PROPOSAL FOR GOVERNMENT POLYTECHNIC UPGRADATION

### INTRODUCTION

1.1 Karnataka has adopted the 10+3 pattern of education for Diploma and 10+2+4 for Engineering (Degree) in the State. The Department of Technical Education, Government of Karnataka, which was established in the year 1959, with the vision to provide modern need based quality technical education and to offer well trained profession human resource to the industries, business and community. Importance is given for up gradation of syllabus periodically to meet the modern technology. The Department administers 289 Polytechnics in the State which includes 81 Government Polytechnics, 43 Private Aided Polytechnics and 165 Private Polytechnics and the examination is conducted under Board of Technical Examination in the State, which offer education to about 2.29 lakhs students studying at Diploma Level. Similarly, the Department administers 187 Engineering colleges which includes 10 Government Engineering Colleges 11 Private Aided Engineering Colleges, 05 Evening Engineering Colleges and 159 Private Engineering Colleges under Vishveswaraiah Technological University in the State, which offer education to about 1.76 lakhs students studying at Engineering Degree Level.

Admission for Diploma is made more accessible to students of all regions by establishing nodal centres at District level. Admissions for Engineering Courses are done by Karnataka Examination Authority (KEA) and Comed-K.

**1.2 REQUIREMENT OF FUNDS:**

Prior to 2007-08 there were only 38 Govt. Polytechnics. These 38 Govt. Polytechnics were established from the year 1941 onwrds. These Polytechnics have all infrastructure facilities which became old and require construction/repairs of buildings and latest equipments, books and furniture's. The total additional fund required for construction of workshop building, repair of polytechnic and hostel building, purchase of equipments, books and furniture's is estimated at 50.00 Crores. The details are given below.

| Sl. No. | Name of the Polytechnic | Repair of Building | | Construction Of workshop | Purchase of | | | Total |
|---|---|---|---|---|---|---|---|---|
| | | Poly Technic | Hostel | | Equipments | Furniture | Books | |
| 1 | GRICP, Bangalore | 50.00 | 0.00 | 0.00 | 25.00 | 10.00 | 10.00 | 95.00 |
| 2 | Govt. Polytechnic for Women Bangalore | 25.00 | 25.00 | 0.00 | 25.00 | 10.00 | 10.00 | 95.00 |
| 3 | S.J (Govt.) Polytechnic, Bangalore | 25.00 | 25.00 | 0.00 | 25.00 | 10.00 | 10.00 | 95.00 |
| 4 | Govt. Film & TV Institute Hesaraghatta | 50.00 | 0.00 | 0.00 | 25.00 | 10.00 | 10.00 | 95.00 |
| 5. | Govt. Polytechnic, Belgaum | 25.00 | 25.00 | 0.00 | 25.00 | 10.00 | 10.00 | 95.00 |
| 6 | Govt. Polytechnic, Bijapur | 25.00 | 25.00 | 0.00 | 25.00 | 10.00 | 10.00 | 95.00 |
| 7 | Govt. Polytechnic, Chamarajanagar | 25.00 | 25.00 | 0.00 | 25.00 | 10.00 | 10.00 | 95.00 |
| 8 | Govt. Polytechnic, Bagepalli | 50.00 | 0.00 | 50.00 | 25.00 | 10.00 | 10.00 | 145.00 |
| 9 | DACG (Govt.) Polytechnic, Chikkamagalur | 25.00 | 25.00 | 0.00 | 25.00 | 10.00 | 10.00 | 95.00 |
| 10 | DRR Govt. Polytechnic, Davanagere | 25.00 | 25.00 | 0.00 | 25.00 | 10.00 | 10.00 | 95.00 |
| 11 | Govt. Polytechnic, Gulbarga | 25.00 | 25.00 | 0.00 | 25.00 | 10.00 | 10.00 | 95.00 |
| 12 | Govt. Polytechnic, Karwar | 25.00 | 25.00 | 0.00 | 25.00 | 10.00 | 10.00 | 95.00 |
| 13 | Govt. Polytechnic, Chintamani | 25.00 | 25.00 | 0.00 | 25.00 | 10.00 | 10.00 | 95.00 |
| 14 | Govt. Polytechnic, Kustagi | 50.00 | 0.00 | 50.00 | 25.00 | 10.00 | 10.00 | 145.00 |
| 15 | Govt. Polytechnic, K.R. Pet | 25.00 | 25.00 | 0.00 | 25.00 | 10.00 | 10.00 | 95.00 |
| 16 | Karnataka (Govt.) Polytechnic, Mangalore | 25.00 | 25.00 | 0.00 | 25.00 | 10.00 | 10.00 | 95.00 |
| 17 | CPC (Govt.) Polytechnic, Mysore | 25.00 | 25.00 | 0.00 | 25.00 | 10.00 | 10.00 | 95.00 |
| 18 | Govt. Polytechnic, Raichur | 25.00 | 25.00 | 0.00 | 25.00 | 10.00 | 10.00 | 95.00 |
| 19 | Govt. Polytechnic, Channapatna | 25.00 | 25.00 | 0.00 | 25.00 | 10.00 | 10.00 | 95.00 |
| 20 | Govt. Polytechnic, Tumkur | 25.00 | 30.00 | 0.00 | 20.00 | 10.00 | 10.00 | 95.00 |
| **Total** | | | | | | | | **2000.00** |

**BENEFITS:**

- Equipping the Polytechnics with latest equipments/instruments, books and furniture's.
- By repairs/renovation of Old Govt. Polytechnic and Hostel buildings, students have better learning atmosphere in the Institute.
- Construction of workshop buildings wherever workshop building are not in existence.

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

PR No. 463

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಪಾಲಿಟೆಕ್ನಿಕ್ ಮಹಿಳಾ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಆರ್ಥಿಕ ಇಲಾಖೆ ಪತ್ರ ಸಂಖ್ಯೆ: ಆಇ 02 ಬಿಎಸ್‌ಜಿ 2011 ದಿನಾಂಕ: 04-01-2012.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ಧನಸಹಾಯ ಯೋಜನೆಯಡಿ ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೊಳಪಡುವ 57 ಸರ್ಕಾರಿ ಪಾಲಿಟೆಕ್ನಿಕ್ ಮಹಿಳಾ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕಾಗಿ ಆರ್ಥಿಕ ಇಲಾಖೆಯು ಪೂರಕ ಅಂದಾಜಿನಲ್ಲಿ ಹಣ ಬಿಡುಗಡೆ ಮಾಡಿ ಮೇಲೆ ಓದಲಾದ ಪತ್ರದಲ್ಲಿ ಅನುದಾನವನ್ನು ಬಳಸಿಕೊಳ್ಳಲು ಅನುಮತಿ ನೀಡಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 21 ಹೆಚ್‌ಪಿಟಿ 2011 ಬೆಂಗಳೂರು, ದಿನಾಂಕ: 23-01-2012**

ಕೇಂದ್ರ ಸರ್ಕಾರದ ಧನಸಹಾಯ ಯೋಜನೆಯಡಿ ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೊಳಪಡುವ 57 ಸರ್ಕಾರಿ ಪಾಲಿಟೆಕ್ನಿಕ್ ಮಹಿಳಾ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕಾಗಿ ಲೆಕ್ಕಶೀರ್ಷಿಕೆ 4202-02-104-1-05-386 (ಯೋಜನೆ) ರಡಿ ರೂ. 880.00 ಲಕ್ಷಗಳನ್ನು (ಎಂಟುನೂರ ಎಂಬತ್ತು ಲಕ್ಷಗಳು) ಪಾಲಿಟೆಕ್ನಿಕ್‌ವಾರು ಹಣ ಮಂಜೂರಾಗಿರುವ ಮೊತ್ತವನ್ನು ಖಚಿತಪಡಿಸಿಕೊಂಡು ಬಿಡುಗಡೆ ಮಾಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಪ್ರಚಲಿತ ನಿಯಮಗಳನ್ನು ಪಾಲಿಸುವ ಷರತ್ತಿಗೊಳಪಟ್ಟು ಅನುಮತಿ ನೀಡಲಾಗಿದೆ. ಈ ಬಗ್ಗೆ ಕಾಲೇಜುವಾರು ಬಳಕೆಯಾಗಿರುವ ಅನುದಾನಕ್ಕೆ ಉಪಯೋಗತಾ ಪತ್ರ ಸಲ್ಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಅ.ಟಿ. ಸಂಖ್ಯೆ ಆಇ 844 ವೆಚ್ಚ-8 2011 ದಿನಾಂಕ: 7-1-2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 464

## ಶಿಕ್ಷಣ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ಇಡಿ 119 ಯೋಯೋಕ 2011 ಬೆಂಗಳೂರು, ದಿನಾಂಕ: 24-01-2012**

**ವಿಷಯ :** ಕಿತ್ತೂರು ರಾಣಿ ಚನ್ನಮ್ಮ ವಸತಿ ಸೈನಿಕ ಶಾಲೆಗೆ 2011-12ನೇ ಸಾಲಿನಲ್ಲಿ ಒದಗಿಸಲಾದ ಆಯವ್ಯಯದಲ್ಲಿ ಅನುದಾನ ಬಿಡುಗಡೆ ಬಗ್ಗೆ ಅನುಮೋದನೆಯ ಸೇರ್ಪಡೆ ಆದೇಶ ಕುರಿತು.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ: ಇಡಿ:119:ಯೋಯೋಕ 2011, ದಿನಾಂಕ: 12-12-2011.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದಲ್ಲಿ ಕಂಡಿಕೆ 6ರ ನಂತರ ಈ ಕೆಳಕಂಡ 6(A) ಸೇರಿಸಿ ಓದಿಕೊಳ್ಳುವುದು ಲೆಕ್ಕಶೀರ್ಷಿಕೆ 2202-02-110-3-03-101 (ಯೋಜನೇತರ)ರಡಿ ರೂ. 58.75 ಲಕ್ಷ (ಐವತ್ತೆಂಟು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಈ ಕೆಳಕಂಡ ಕಾರ್ಯಕ್ರಮಗಳಿಗೆ ಅವುಗಳ ಮುಂದೆ ತೋರಿಸಿರುವಂತೆ ಬಿಡುಗಡೆ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

| | | | |
|---|---|---|---|
| 1. | ಬಾಕಿ ವಿದ್ಯಾರ್ಥಿವೇತನಗಳಿಗೆ | – | ರೂ. 12.385 ಲಕ್ಷ |
| 2. | ವಿವಿಧ ಕಾಮಗಾರಿಗಳಿಗೆ/ದುರಸ್ಥಿ/ಸೇರ್ಪಡೆ ಮತ್ತು ಮಾರ್ಪಾಡು | – | ರೂ. 46.365 ಲಕ್ಷ |
| | **ಒಟ್ಟು** | – | **ರೂ. 58.750 ಲಕ್ಷ** |

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 465

## ಕಂದಾಯ ಸಚಿವಾಲಯ

**ವಿಷಯ :** ಕಾವೇರಿ ಯೋಜನೆ ನಿರ್ವಹಣೆಯ ಗುತ್ತಿಗೆದಾರರಾದ ಮೆ॥ ಇಸಿಐಎಲ್, ಮೆ॥ ಸಿಎಂಎಸ್ ಕಂಪ್ಯೂಟರ್ಸ್ ಪ್ರೈ.ಲಿ. ಮತ್ತು ಸಿ-ಡಾಕ್, ಪುಣೆ ರವರ ಗುತ್ತಿಗೆ ಅವಧಿಯನ್ನು ಮುಂದುವರಿಸುವ ಬಗ್ಗೆ ಹಾಗೂ ಸೇವಾ ಪೂರೈಕೆದಾರರಿಗೆ ನೀಡುವ ದರಗಳನ್ನು ಪರಿಷ್ಕರಿಸುವ ಕುರಿತು-ಆದೇಶ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಮುನೋಮು 2011 ದಿನಾಂಕ: 18-8-2011
2) ತಾಂತ್ರಿಕ ಸಲಹಾ ಸಮಿತಿ ಸಭೆ ದಿನಾಂಕ: 15-9-2011
3) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:ಸಿಐಎಂಪಿ 09/2007-08 ದಿನಾಂಕ: 29-10-2011, 31-10-2011 ಮತ್ತು 14-12-2011.
4) ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಇ 1011 ವೆಚ್ಚ-12/11 ದಿನಾಂಕ: 02-12-2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ನೂತನ ಕಾವೇರಿ ಯೋಜನೆಯ ಹಾರ್ಡ್‌ವೇರ್ ಟೆಂಡರನ್ನು ಪ್ರಕಟಪಡಿಸಿ ನೂತನ ಗುತ್ತಿಗೆದಾರರನ್ನು ಆಯ್ಕೆ ಮಾಡಿಕೊಳ್ಳುವವರೆಗೆ ಪ್ರಸ್ತುತ ಗುತ್ತಿಗೆದಾರರ ಅವಧಿಯನ್ನು ಮುಂದುವರೆಸುವುದು ಅತ್ಯವಶ್ಯಕವಿರುತ್ತದೆಂದು, ಗುತ್ತಿಗೆ

ಅವಧಿಯನ್ನು ಮುಂದುವರೆಸಲ್ಪಡದಿದ್ದರೆ ಸಾರ್ವಜನಿಕ ಸೇವೆಗೆ ತೊಂದರೆಯಾಗುತ್ತದೆ ಎಂಬ ಕಾರಣದಿಂದ ಮೇಲೆ ದಿನಾಂಕ: 01-04-2011 ರಿಂದ 15-10-2011ರವರೆಗೆ ಮೆ॥ಇಸಿಐಎಲ್, ಮೆ॥ಸಿಎಂಎಸ್ ಕಂಪ್ಯೂಟರ್ಸ್ ಪ್ರೈ.ಲಿ. ಮತ್ತು ಸಿ-ಡಾಕ್, ಪುಣೆ ರವರ ಗುತ್ತಿಗೆ ಅವಧಿಯನ್ನು ದಿನಾಂಕ: 15-10-2011ರ ವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿತ್ತು. ಸದರಿ ಯೋಜನೆಯ ಗುತ್ತಿಗೆ ಅವಧಿಯು ದಿನಾಂಕ: 15-10-2011 ರಂದು ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ (2)ರ ಸಭೆಯ ನಡವಳಿಯಂತೆ, ಮೇಲೆ ಓದಲಾದ (3)ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ದಿನಾಂಕ 15-9-2011 ರಂದು ಜರುಗಿದ ತಾಂತ್ರಿಕ ಸಲಹಾ ಸಮಿತಿ ಸಭೆಯಲ್ಲಿ ನೂತನ ಕಾವೇರಿ ಯೋಜನೆಯ ಹಾರ್ಡ್‌ಮೇರ್ ಪೂರೈಕೆಗೆ ಸಂಬಂಧಿಸಿದ ಆರ್‌ಎಫ್‌ಪಿಯಲ್ಲಿ ಬದಲಾವಣೆ ಮಾಡಬೇಕಾಗಿರುವ ಬಿಸಿನೆಸ್ ಮಾಡೆಲ್ ಬಗ್ಗೆ ಹಾಗೂ ಇತರ ವಿಷಯಗಳ ಬಗ್ಗೆ ಚರ್ಚಿಸಿ ಅಂತಿಮವಾಗಿ ಆರ್‌ಎಫ್‌ಪಿಯು ಅನುಮೋದಿಸಲ್ಪಟ್ಟ ನಂತರ ಉತ್ಸುಕ ಬಿಡ್‌ದಾರರಿಂದ ಬಿಡ್ ಆಹ್ವಾನಿಸಿ ಟೆಂಡರ್ ಪ್ರಕಟಿಸಿ, ಟೆಂಡರ್ ಪ್ರಕ್ರಿಯೆ ಪ್ರಾರಂಭಿಸಿ ನೂತನ ಗುತ್ತಿಗೆದಾರರನ್ನು ಆಯ್ಕೆ ಮಾಡಲು ಹಾಗೂ ಆಯ್ಕೆಗೊಂಡ ನೂತನ ಗುತ್ತಿಗೆದಾರರು ನೂತನ ಹಾರ್ಡ್‌ವೇರ್ ಪೂರೈಸಿ ಯೋಜನೆಯ ಸಂಪೂರ್ಣ ನಿರ್ವಹಣೆಯನ್ನು ವಹಿಸಿಕೊಳ್ಳಲು ಕನಿಷ್ಟವೆಂದರೂ 9 ತಿಂಗಳುಗಳ ಕಾಲಾವಕಾಶ ಬೇಕಾಗುತ್ತದೆ, ಅಲ್ಲಿಯವರೆಗೆ ಪ್ರಸ್ತುತ ಕಾವೇರಿ ಯೋಜನೆಯ ಗುತ್ತಿಗೆ ಅವಧಿಯನ್ನು ವಿಸ್ತರಿಸಬೇಕಾಗುತ್ತದೆ. ಮೆ॥ಇಸಿಐಎಲ್ ಹಾಗೂ ಮೆ॥ಸಿಎಂಎಸ್ ಕಂಪ್ಯೂಟರ್ಸ್ ಪ್ರೈ.ಲಿ. ರವರು ಪತ್ರಗಳನ್ನು ಸಲ್ಲಿಸಿ ಪ್ರಸ್ತುತ ಕಾವೇರಿ ಯೋಜನೆಗಾಗಿ ಉಪಯೋಗಿಸಲ್ಪಡುತ್ತಿರುವ ಕಂಪ್ಯೂಟರ್, ಪ್ರಿಂಟರ್, ಸ್ಕ್ಯಾನರ್, ಯುಪಿಎಸ್, ಜನರೇಟರ್ ಇತ್ಯಾದಿಗಳು ಸತತ 8 ವರ್ಷಕ್ಕೂ ಹೆಚ್ಚು ಅವಧಿಯ ಬಳಕೆಯಿಂದ ಕಾರ್ಯಕ್ಷಮತೆ ಕಳೆದುಕೊಂಡಿದ್ದು ಅವುಗಳನ್ನು ನಿರ್ವಹಿಸಲು ಸಾಧ್ಯವಿಲ್ಲದಿರುವ ಕಾರಣ, ಸೇವಾ ಪೂರೈಕೆಯನ್ನು ಮುಂದಿನ 9 ತಿಂಗಳಿಗೆ ಮುಂದುವರೆಸಲು ಹೊಸ ಐಟಿ ಮೂಲಸೌಕರ್ಯಗಳಾದ ಪ್ರಿಂಟರ್, ಸ್ಕ್ಯಾನರ್, ಯು.ಪಿ.ಎಸ್. ಜನರೇಟರ್ ಇತ್ಯಾದಿಗಳಿಗೆ ಬಂಡವಾಳ ಹೂಡಬೇಕಾಗಿದೆ ಹಾಗೂ ಈ ಮೂಲಸೌಕರ್ಯಗಳು 9 ತಿಂಗಳ ನಂತರ ಇಲಾಖೆಯ ಆಸ್ತಿಯಾಗಲಿದೆ ಎಂದು ಸದರಿ ಸಂಸ್ಥೆಯವರೊಂದಿಗೆ ದಿನಾಂಕ: 17-10-2011 ಮತ್ತು 18-10-2011 ರಂದು ನಡೆಸಿದ ಸಭೆಯಲ್ಲಿ ಚರ್ಚಿಸಿ ತೀರ್ಮಾನಿಸಲಾಗಿರುತ್ತದೆ.

ಮೇಲೆ ಓದಲಾದ (4)ರ ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಇ 1011 ವೆಚ್ಚ-12/11 ದಿನಾಂಕ: 02-12-2011ರಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ದಿನಾಂಕ: 16-10-2011 ರಿಂದ 15-7-2012 ರ ವರೆಗೆ 9 ತಿಂಗಳಿಗೆ ಕಾವೇರಿ ಯೋಜನೆಯ ನಿರ್ವಹಣಾ ಕಾರ್ಯವನ್ನು ಬೆಂಗಳೂರು ನಗರ ಜಿಲ್ಲೆಗೆ ರೂ. 18/-ರ ದರದಲ್ಲಿ ಹಾಗೂ ಇತರೆ ಜಿಲ್ಲೆಗಳಲ್ಲಿ ರೂ. 28/-ರ ದರದಲ್ಲಿ ಮೆ॥ಇಸಿಐಎಲ್ ಮತ್ತು ಮೆ॥ಸಿಎಂಎಸ್ ಕಂಪ್ಯೂಟರ್ಸ್ ಪ್ರೈ.ಲಿ., ಸಂಸ್ಥೆಗಳಿಂದ ನೇರವಾಗಿ ಪಡೆಯಲು ಹಾಗೂ ಮೆ॥ಸಿ-ಡಾಕ್, ಪುಣೆ ಇವರ ಗುತ್ತಿಗೆ ಅವಧಿಯನ್ನು ವಿಸ್ತರಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಕಂದಾಯ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿ ಆರ್ಥಿಕ ಇಲಾಖೆಯು ಅಧಿಸೂಚನೆ ಹೊರಡಿಸಿದೆ.

ದಿನಾಂಕ: 7-12-2011 ರಂದು ಇ-ಆಡಳಿತ ಇಲಾಕೆಯ, ಎನ್‌ಐಸಿ ಅಧಿಕಾರಿಗಳು ಮತ್ತು ಬಾಹ್ಯ ತಜ್ಞರನ್ನು ಒಳಗೊಂಡ ಸದಸ್ಯರ ಸಮಿತಿಯು ಸಭೆ ಸೇರಿ ಕೂಲಂಕಷವಾಗಿ ಪರಿಶೀಲಿಸಿ ಪರಿಷ್ಕೃತ ಲೆಕ್ಕಾಚಾರ ಮಾಡಿದ ಪ್ರಕಾರ ಪ್ರತಿ ವ್ಯವಹರಣೆಗೆ ಮಾರಾಟಗಾರರಿಗೆ 9 ತಿಂಗಳಿಗೆ ಈ ಕೆಳಕಾಣಿಸಿದ ದರಗಳಂತೆ ಪಾವತಿಸಬೇಕಾಗಿರುತ್ತದೆ ಎಂದು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಸಮಿತಿಗೆ ಶಿಫಾರಸ್ಸು ಮಾಡಿರುವುದು ಯುಕ್ತವಾಗಿದೆ ಎಂದು ಸಮಿತಿಯು ತೀರ್ಮಾನಿಸಿರುತ್ತದೆ.

| ವರ್ಷ | ಸಿಎಂಎಸ್ ಕಂಪ್ಯೂಟರ್ಸ್ ನಿರ್ವಹಿಸುವ ಬೆಂಗಳೂರು ಜಿಲ್ಲೆ | ಸಿಎಂಎಸ್ ಕಂಪ್ಯೂಟರ್ಸ್ ನಿರ್ವಹಿಸುವ ಬೆಂಗಳೂರು ಹೊರತುಪಡಿಸಿದ ಜಿಲ್ಲೆಗಳು | ಇಸಿಐಎಲ್ ನಿರ್ವಹಿಸುವ ಜಿಲ್ಲೆಗಳು |
|---|---|---|---|
| 16ನೇ ಅಕ್ಟೋಬರ್, 2011 ರಿಂದ 15ನೇ ಜುಲೈ, 2012 | ರೂ. 18/- | ರೂ. 27.50 | ರೂ. 28/- |

ಮೇಲಿನ ಕಂಡಿಕೆಗಳಲ್ಲಿ ವಿವರಿಸಿರುವಂತೆ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 213 ಮುನೋಮು 2011, ಬೆಂಗಳೂರು, ದಿನಾಂಕ: 13-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯು ನೂತನ ಕಾವೇರಿ ಯೋಜನೆಯ ಹಾರ್ಡ್‌ವೇರ್ ಪೂರೈಕೆಗೆ ನೂತನ ಗುತ್ತಿಗೆದಾರರನ್ನು ಆಯ್ಕೆ ಮಾಡಿ ಅನುಷ್ಠಾನಗೊಳಿಸಲು ಕಾಲಾವಕಾಶಬೇಕಾಗಿರುವುದರಿಂದ ಪ್ರಸ್ತುತ ಗುತ್ತಿಗೆದಾರರಾದ ಮೆ॥ ಇಸಿಐಎಲ್, ಮೆ॥ಸಿಎಂಎಸ್ ಕಂಪ್ಯೂಟರ್ಸ್ ಲಿಮಿಟೆಡ್ ಇವರಿಗೆ ಈ ಕೆಳಕಾಣಿಸಿದ ದರ ಪರಿಷ್ಕರಣೆಯೊಂದಿಗೆ ದಿನಾಂಕ: 16-10-2011 ರಿಂದ 15-07-2012ರ ವರೆಗೆ ಒಂಭತ್ತು (9) ತಿಂಗಳ ಅವಧಿಗೆ ಮೆ॥ಸಿ-ಡಾಕ್, ಪುಣೆ ಮೆ॥ ಇಸಿಐಎಲ್ ಮತ್ತು ಮೆ॥ ಸಿಎಂಎಸ್ ಕಂಪ್ಯೂಟರ್ಸ್ ಪ್ರೈವೇಟ್ ಲಿಮಿಟೆಡ್ ಸಂಸ್ಥೆಗಳ ಗುತ್ತಿಗೆ ಅವಧಿಯನ್ನು ವಿಸ್ತರಿಸಿ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಸರ್ಕಾರವು ಆದೇಶಿಸಿದೆ.

**ಪರಿಷ್ಕೃತ ದರ:**

| ವರ್ಷ | ಸಿಎಂಎಸ್ ಕಂಪ್ಯೂಟರ್ಸ್ ನಿರ್ವಹಿಸುವ ಬೆಂಗಳೂರು ಜಿಲ್ಲೆ | ಸಿಎಂಎಸ್ ಕಂಪ್ಯೂಟರ್ಸ್ ನಿರ್ವಹಿಸುವ ಬೆಂಗಳೂರು ಹೊರತುಪಡಿಸಿದ ಜಿಲ್ಲೆಗಳು | ಇಸಿಐಎಲ್ ನಿರ್ವಹಿಸುವ ಜಿಲ್ಲೆಗಳು |
|---|---|---|---|
| 16ನೇ ಅಕ್ಟೋಬರ್, 2011 ರಿಂದ 15ನೇ ಜುಲೈ, 2012 | ರೂ. 18/- | ರೂ. 27.50 | ರೂ. 28/- |

**ಷರತ್ತುಗಳು:**

(1) ಮೆ॥ ಇಸಿಐಎಲ್, ಮೆ॥ಸಿಎಂಎಸ್ ಕಂಪ್ಯೂಟರ್ಸ್ ಪ್ರೈವೇಟ್ ಲಿಮಿಟೆಡ್ ಹಾಗೂ ಮೆ॥ ಸಿ-ಡಾಕ್, ಪುಣೆ ಇವರೊಂದಿಗಿನ ಗುತ್ತಿಗೆ ಅವಧಿಯನ್ನು ದಿನಾಂಕ: 15-07-2012ರ ನಂತರ ಯಾವುದೇ ಕಾರಣಕ್ಕೂ ಮುಂದುವರಿಸಲಾಗುವುದಿಲ್ಲ.

(2) ಅಷ್ಟರಲ್ಲಿ ನಿಯಮಾನುಸಾರ ಟೆಂಡರ್ ಕರೆದು ಗುತ್ತಿಗೆ ನೀಡಲು ಶೀಘ್ರ ಕ್ರಮ ತೆಗೆದುಕೊಳ್ಳುವುದು ಮತ್ತು ಉತ್ತಮ ಗುಣಮಟ್ಟದ ಸೇವೆಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಆಡಳಿತ ಇಲಾಖೆಯು ದೃಢಪಡಿಸುವುದು.

(3) ಗುತ್ತಿಗೆದಾರರು ಪೂರೈಸುವ ನೂತನ ಹಾರ್ಡ್‌ವೇರ್‌ಗಳನ್ನು ಮುಂದುವರೆಸಲ್ಪಡುವ ಗುತ್ತಿಗೆ ಅವಧಿ ಮುಗಿದ ನಂತರ ಇಲಾಖೆಯ ಸುಪರ್ದಿಗೆ ಬಿಟ್ಟುಕೊಡತಕ್ಕದ್ದು.

(4) ಮುಂದುವರೆಸಲ್ಪಡುವ ಗುತ್ತಿಗೆ ಅವಧಿಯಲ್ಲಿ ಉಪ ನೋಂದಣಿ ಕಛೇರಿಗಳಲ್ಲಿರುವ ಹಾರ್ಡ್‌ವೇರ್‌ಗಳನ್ನು ಸುಸ್ಥಿತಿಯಲ್ಲಿ ಹಾಗೂ ಉತ್ತಮವಾಗಿ ಕಾರ್ಯನಿರ್ವಹಿಸುವ ಸ್ಥಿತಿಯಲ್ಲಿರುವಂತೆ ನಿರ್ವಹಿಸತಕ್ಕದ್ದು.

(5)ಪೂರೈಸಲ್ಪಡುವ ಹಾರ್ಡ್‌ವೇರ್‌ಗಳ ಸ್ಪೆಸಿಫಿಕೇಶನ್‌ಗಳು ಇಲಾಖೆಯು ಸೂಚಿಸುವ ಸ್ಪೆಸಿಫಿಕೇಶನ್‌ಗಳಂತೆ ಇರತಕ್ಕದ್ದು.

(6) ಮುಂದುವರೆಸಲ್ಪಡುವ ಗುತ್ತಿಗೆ ಅವಧಿಯಲ್ಲಿ ಆಪರೇಟರ್ ಹಾಗೂ ಇಂಜಿನಿಯರ್‌ರವರುಗಳ ಸೇವೆಯು ಸಮರ್ಪಕ ಹಾಗೂ ತೃಪ್ತಿದಾಯಕವಾಗಿರತಕ್ಕದ್ದು.

(7) ಮುಂದುವರೆಸಲ್ಪಡುವ ಗುತ್ತಿಗೆ ಅವಧಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಮುನೋಮು 2011 ದಿನಾಂಕ: 08–08–2011 ರಲ್ಲಿರುವ ಎಲ್ಲಾ ಷರತ್ತುಗಳಿಗೆ ಗುತ್ತಿಗೆದಾರರು ಬದ್ಧರಾಗಿರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ:ಆಇ 1011 ವೆಚ್ಚ–12/11 ದಿನಾಂಕ: 02–12–2011ರ ಅನ್ವಯ ಮತ್ತು ಈ ಸಂಬಂಧಿತ ವೆಚ್ಚವನ್ನು 2011–12ನೇ ಸಾಲಿನ ಇಲಾಖೆಯ ಲೆಕ್ಕ ಶೀರ್ಷಿಕೆ 2030–03–001–2–04 Charges of Supply of Registered Documents-051 General Expenses ಅಡಿಯಲ್ಲಿ ಭರಿಸಲು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 650 ವೆಚ್ಚ–7/2011 ದಿನಾಂಕ: 2–12–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 466

## ಕಂದಾಯ ಸಚಿವಾಲಯ

**ವಿಷಯ :** ಕೊಪ್ಪಳ ತಾಲ್ಲೂಕಿನ ನರೇಗಲ್ ಗ್ರಾಮದಲ್ಲಿ ಆಸರೆ ಮನೆಗಳ ಬಡಾವಣೆಯಲ್ಲಿ ಚರಂಡಿ ಸಂಪರ್ಕ ಕಲ್ಪಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ :**

ಕೊಪ್ಪಳ ತಾಲ್ಲೂಕಿನ ನರೇಗಲ್ ಗ್ರಾಮದಲ್ಲಿ ವಿಪ್ರೋ ಕಂಪನಿಯವರು 428 ಆಸರೆ ಮನೆಗಳನ್ನು ನಿರ್ಮಾಣಗೊಳಿಸಿ ಸದರಿ ಮನೆಗಳ ಸ್ನಾನ ಮತ್ತು ಶೌಚಾಲಯ ಸಂಪರ್ಕಗಳನ್ನು ಗುಂಡಿಯಲ್ಲಿ ಜೋಡಿಸಿರುತ್ತಾರೆ. ಈ ಗುಂಡಿಗಳು ಸ್ವಲ್ಪ ದಿನಗಳ ನಂತರ ತುಂಬಿಕೊಂಡು ವಾತಾವರಣ ಮಲೀನವಾಗುವ ಸಾಧ್ಯತೆಯಿರುತ್ತದೆ. ಆದ್ದರಿಂದ ಈ ಬಡಾವಣೆಯಲ್ಲಿ ಚರಂಡಿ ಸಂಪರ್ಕ ಕಲ್ಪಿಸಲು ರೂ. 10 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 365 ಟಿಎನ್‌ಆರ್ 2011, ಬೆಂಗಳೂರು, ದಿನಾಂಕ: 12–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ತಾಲ್ಲೂಕಿನ ನರೇಗಲ್ ಗ್ರಾಮದ ಆಸರೆ ಬಡಾವಣೆಯಲ್ಲಿ ಚರಂಡಿ ಸಂಪರ್ಕ ಕಲ್ಪಿಸಲು ರೂ. 10.00 (ರೂ. ಹತ್ತು ಲಕ್ಷಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು ಕೊಪ್ಪಳ ಜಿಲ್ಲೆ, ಇವರಿಗೆ ಬಿಡುಗಡೆ ಮಾಡಲು ಸರ್ಕಾರ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235–00–111–0–02 "Public Contributions to the Calamity Relief" ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್–8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಸಂಬಂಧಿಸಿದ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿಕೊಳ್ಳಲು ಆದೇಶಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಮಾನ್ಯ ಮುಖ್ಯ ಮಂತ್ರಿಯವರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ಆನಂದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 467

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಕೃಷ್ಣಯ್ಯ, ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು

**ಓದಲಾಗಿದೆ:**
1) ಮಾನ್ಯ ಕಂದಾಯ ಸಚಿವರ ಟಿಪ್ಪಣಿ ಸಂಖ್ಯೆ:ಕಂ.ಸ/ಗೃಹ ಕಛೇರಿ/153/2011, ದಿನಾಂಕ: 04.03.2011.
2) ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 09 ಎಡಿಇ 2011, ದಿನಾಂಕ: 07.03.2011
3) ಕರ್ನಾಟಕ ನ್ಯಾಯ ಮಂಡಳಿ, ಮಧ್ಯಂತರ ಆದೇಶ ದಿ: 09.03.2011
4) ಜಿಲ್ಲಾಧಿಕಾರಿಗಳಿಗೆ ಪತ್ರ ದಿನಾಂಕ: 04.07.2011
5) ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ರಾಜಿಕ/ಸಿಬ್ಬಂದಿ/ಸಿಆರ್/72/2011–12, ದಿನಾಂಕ: 27.07.2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ.(1)ರ ಮಾನ್ಯ ಕಂದಾಯ ಸಚಿವರ ಟಿಪ್ಪಣಿಯಲ್ಲಿ ಶ್ರೀ ಸಿ.ಪಿ. ಯೋಗೇಶ್ವರ, ಅಧ್ಯಕ್ಷರು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ, ಬೆಂಗಳೂರು ಇವರ ಪತ್ರದಲ್ಲಿ ಶ್ರೀ ಎಸ್.ಆರ್. ಕೃಷ್ಣಯ್ಯ, ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು ಇವರು ತಾಲ್ಲೂಕಿನ ಸುತ್ತಮುತ್ತಲ ಗ್ರಾಮಾಂತರ ಪ್ರದೇಶಗಳಲ್ಲಿ ರೈತರ ಪಟ್ಟಾ ಜಮೀನುಗಳು ಹಾಗೂ ನದಿ ದಡದಲ್ಲಿ ಇರುವ ಮರಳನ್ನು ಗಣಿ ಉದ್ದಿಮೆದಾರರ ಲಾಬಿಗೆ ಮಣಿದು ಅಕ್ರಮವಾಗಿ ಲಾರಿಗಳಲ್ಲಿ ಬೋಟು ಹಾಗೂ ಇಟಾಚಿ, ಜೆಸಿಪಿ ಯಂತ್ರಗಳಿಂದ ಮಣ್ಣಿನಿಂದ ಮರಳನ್ನು ಫಿಲ್ಟರ್ ಮಾಡಿ ಸಾಗಣೆ ಮಾಡುತ್ತಿದ್ದರೂ ಸಹ ಇವರು ಯಾವುದೇ ರೀತಿಯ ಕಾನೂನು ಕ್ರಮಕೈಗೊಳ್ಳದೇ ಮರಳು ದಂದೆ ಮಾಡುತ್ತಿರುವವರ ಜೊತೆಗೆ ಶಾಮೀಲಾಗಿರುವುದರಿಂದ ತಾಲ್ಲೂಕಿನಲ್ಲಿ ಅಂತರ್ಜಲ ಬತ್ತಿ ಹೋಗಿ ಕುಡಿಯುವ ನೀರಿಗೂ ಸಹ ಹಾಹಕಾರ ಉಂಟಾಗಿರುವುದಾಗಿ ಹಾಗೂ ಶ್ರೀ ನರಸಿಂಹಸ್ವಾಮಿ ದೇವಾಲಯಕ್ಕೆ ಹೊಸ ಹುಂಡಿ ಖರೀದಿಯಲ್ಲಿ ಇಲಾಖಾ ನಿಯಮಗಳನ್ನೆಲ್ಲಾ ಗಾಳಿಗೆ ತೂರಿ ಹುಂಡಿ ಖರೀದಿಸಿ, ಹಣ ದುರುಪಯೋಗ ಮಾಡಿರುತ್ತಾರೆ. ಮತ್ತು ಚನ್ನಪಟ್ಟಣ ತಾಲ್ಲೂಕಿನ ಮತದಾರರ ಪಟ್ಟಿಯಲ್ಲಿ 10,000 ಬೋಗಸ್ ಮತದಾರರಿದ್ದು, ಈ ವಿಷಯವನ್ನು ಅವರ ಗಮನಕ್ಕೆ ತಂದರೂ ಸಹ ಅವರು ಹೆಸರನ್ನು ತೆಗೆದು ಹಾಕಲು ನಿರ್ಲಕ್ಷ್ಯತನ ತೋರಿಸಿರುವುದರಿಂದ ಹಾಗೂ ಇವರ ವಿರುದ್ಧ ಪದೇ ಪದೇ ಸಾರ್ವಜನಿಕರಿಂದಲೂ ದೂರುಗಳು ಬರುತ್ತಿರುವುದರಿಂದ ಇವರನ್ನು ಕೂಡಲೇ ಕರ್ತವ್ಯದಿಂದ ಅಮಾನತ್ತುಗೊಳಿಸುವಂತೆ ಕೋರಿರುತ್ತಾರೆ ಎಂದು ತಿಳಿಸುತ್ತಾ, ಸದರಿ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ ಅಮಾನತ್ತುಗೊಳಿಸಿ ಹಾಗೂ ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಜರೂರು ವಿಚಾರಣೆಗೊಳಪಡಿಸುವುದು ಎಂದು ಆದೇಶಿಸಿದ್ದರು.

ಶ್ರೀ ಎಸ್.ಆರ್. ಕೃಷ್ಣಯ್ಯ, ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇವರು ಕಛೇರಿಯ ಆಡಳಿತವನ್ನು ಪರಿಣಾಮಕಾರಿಯಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇರುವುದು ಅಲ್ಲದೇ ಅಧಿಕಾರದ ಹಾಗೂ ಸಾರ್ವಜನಿಕ ಹಣದ ದುರುಪಯೋಗದಂತಹ ಆಪಾದನೆಗಳನ್ನು ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ, ಸದರಿಯವರ ಇಲಾಖಾ ವಿಚಾರಣೆ ಕಾಯ್ದಿರಿಸಿ ಮೇಲೆ ಓದಲಾದ ಕ್ರ.ಸಂ. (2) ರ ದಿನಾಂಕದ ಆದೇಶದಲ್ಲಿ ಅಮಾನತ್ತುಗೊಳಿಸಿ ಆದೇಶಿಸಲಾಗಿರುತ್ತದೆ. ಸದರಿ ಅಧಿಕಾರಿ ಅಮಾನತ್ತು ಆದೇಶವನ್ನು ಪ್ರಶ್ನಿಸಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 1143/2011ಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ಮೇಲೆ ಓದಲಾದ ಕ್ರ.ಸಂ.(3) ರ ದಿನಾಂಕ: 09.03.2011 ರ ಮಧ್ಯಂತರ ಆದೇಶದಲ್ಲಿ ಅಮಾನತ್ತಿನ ಆದೇಶಕ್ಕೆ ತಡೆಯಾಜ್ಞೆ ನೀಡಿರುತ್ತದೆ. ನಂತರ, ಸದರಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದನ್ವಯ, ಇವರ ಅಮಾನತ್ತನ್ನು ತೆರವುಗೊಳಿಸಿ ದಿನಾಂಕ: 09.05.2011ರ ಆದೇಶದಲ್ಲಿ ಸದರಿಯವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ ಸ್ಥಳ ನಿಯುಕ್ತಿಗೊಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (4) ರಲ್ಲಿ ದಿನಾಂಕ: 04.07.2011 ರ ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ ಇವರಿಗೆ ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ದೋಷಾರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (5) ರಲ್ಲಿ ಮಾನ್ಯ ಜಿಲ್ಲಾಧಿಕಾರಿಗಳು, ಶ್ರೀ ಎಸ್.ಆರ್. ಕೃಷ್ಣಯ್ಯ, ತಹಶೀಲ್ದಾರ್ ಇವರು ಕಾರ್ಯ ನಿರ್ವಹಿಸುತ್ತಿದ್ದ ಅವಧಿ ದಿ: 13.07.2009 ರಿಂದ 07.03.2011 ರವರೆಗೆ ಆಗಿದ್ದು ದೂರುಗಳ ದಾಖಲೆಗಳನ್ನು ಚನ್ನಪಟ್ಟಣ ತಾಲ್ಲೂಕು ಕಛೇರಿಯಿಂದ ಪಡೆದು ಪರಿಶೀಲಿಸಿ ಸದರಿಯವರ ವಿರುದ್ಧ ಮಾಡಲಾದ ಸಾರ್ವಜನಿಕ ದೂರಿನ ವಿಚಾರದಲ್ಲಿ ಪರಿಶೀಲಿಸಲಾಗಿ ಪೂರಕವಾದ ದೂರುಗಳು ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಅಲ್ಲದೆ, ಕಡತದಲ್ಲಿರುವ ದೂರು ಅರ್ಜಿಯಲ್ಲಿ ಸ್ಪಷ್ಟವಾಗಿ ಯಾವ ಗ್ರಾಮಗಳಲ್ಲಿ ಯಾವ ದಿನಾಂಕಗಳಲ್ಲಿ ಲೋಪದೋಷಗಳು ಎಂಬುದು ಸ್ಪಷ್ಟವಾಗಿರುವುದಿಲ್ಲವಿರುವುದರಿಂದ ದಾಖಲೆಗಳು ಅಥವಾ ಸಾಕ್ಷಿದಾರರು ಇಲ್ಲದಿರುವ ಸಂದರ್ಭದಲ್ಲಿ ಇಲಾಖಾ ವಿಚಾರಣೆಯನ್ನು ಕಾನೂನು ಬದ್ಧವಾಗಿ ನಡೆಸಲು ಸಾಧ್ಯವಿಲ್ಲವೆಂಬ ವರದಿಯನ್ನು ನೀಡಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಸರ್ಕಾರವು ಜಿಲ್ಲಾಧಿಕಾರಿಗಳ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಡಲು ಸರ್ಕಾರವು ನಿರ್ಧರಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 09 ಎಡಿಇ 2011, ಬೆಂಗಳೂರು, ದಿನಾಂಕ: 16–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಆರ್. ಕೃಷ್ಣಯ್ಯ, ಹಿಂದಿನ ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ, ಪ್ರಸ್ತುತ ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ಇವರ ವಿರುದ್ಧ ಹೂಡಲಾದ ವಿಚಾರಣೆಯನ್ನು ಕೈಬಿಡಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 468

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ವಾಟರ್ ಟ್ಯಾಂಕರ್ ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಪಾವತಿಸುವ ಬಗ್ಗೆ

**ಓದಲಾಗಿದೆ:** 1. ಬಳ್ಳಾರಿ ಜಿಲ್ಲಾಧಿಕಾರಿಗಳ ಪತ್ರ ಸಂ: ಪ್ರ.ವಿ. 51/2009–10, ದಿನಾಂಕ: 30–09–2011.

2. ಗದಗ ಜಿಲ್ಲಾಧಿಕಾರಿಗಳ ಪತ್ರ ಸಂ: ಪುನರ್ವಸತಿ ಸಿ.ಆರ್. 57/2011–12, ದಿನಾಂಕ: 18–10–2011

**ಪ್ರಸ್ತಾವನೆ :**

ಬಳ್ಳಾರಿ ಮತ್ತು ಗದಗ ಜಿಲ್ಲಾಧಿಕಾರಿಗಳು ಮೇಲೆ ಓದಲಾದ (1) ರಿಂದ (2)ರವರೆಗಿನ ಪತ್ರಗಳಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುತ್‌ಚ್ಛಕ್ತಿ ವ್ಯತ್ಯಯ ಉಂಟಾದ ಬಳ್ಳಾರಿ ಜಿಲ್ಲೆಯ, ಮಾಗಳ, ಹಚ್ಚೋಳಿ ಮತ್ತು ಹೊನ್ನರಳ್ಳಿ ಹಾಗೂ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಅಮರಗೋಳ ಗ್ರಾಮಗಳಲ್ಲಿ ಡೀಸಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಬಳ್ಳಾರಿ ಜಿಲ್ಲಾಧಿಕಾರಿಗಳು ರೂ. 2,15,250/–, ಗದಗ ಜಿಲ್ಲಾಧಿಕಾರಿಗಳು, ರೂ. 1,07,525/– ಒಟ್ಟು ರೂ. 3,22,775/–ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 400 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 12.01.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಬಳ್ಳಾರಿ ಮತ್ತು ಗದಗ ಜಿಲ್ಲಾಧಿಕಾರಿಗಳಿಗೆ ಈ ಕೆಳಗಿನಂತೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆಗಳು | ಬಿಡುಗಡೆ ಮಾಡಿದ ಮೊತ್ತ (ರೂ.ಗಳಲ್ಲಿ) |
|---|---|---|
| 1 | ಬಳ್ಳಾರಿ | 2,15,250/– |
| 2 | ಗದಗ | 1,07,525/– |
| | **ಒಟ್ಟು** | **3,22,775/–** |

(ರೂಪಾಯಿ ಮೂರು ಲಕ್ಷದ ಇಪ್ಪತ್ತೆರಡು ಸಾವಿರದ ಏಳುನೂರ ಎಪ್ಪತ್ತೈದು ಮಾತ್ರ)

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235–00–111–0–02 'Public Contributions to the Calamity Relief'' ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್–8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು ಬಿಡುಗಡೆ ಮಾಡಿರುವ ಹಣವನ್ನು ಹೇಗೆ ಉಪಯೋಗಿಸಲಾಗಿದೆ ಮತ್ತು ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ಆನಂದಪ್ಪ**

ಪಿ.ಆರ್. 469

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿ.ನಿ. & ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಸಿಆಸುಇ 275 ಆಸೇಇ 2011, ಬೆಂಗಳೂರು, ದಿನಾಂಕ: 29–12–2011**

ಕೆ.ಎ.ಎಸ್. ಸಮೂಹ–ಎ (ಆಯ್ಕೆ ಶ್ರೇಣಿ) ವೃಂದಕ್ಕೆ ಕೆಲವು ಹುದ್ದೆಗಳನ್ನು ತಾತ್ಕಾಲಿಕವಾಗಿ ಸೇರ್ಪಡೆಗೊಳಿಸಿ (Temporary Addition) ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 275 ಆಸೇಇ 2011, ದಿನಾಂಕ: 18.08.2011ರ ಆದೇಶ ಭಾಗದ ಕ್ರಮ ಸಂಖ್ಯೆ: 04 ಮತ್ತು 07 ರಲ್ಲಿನ ಹುದ್ದೆಗಳಿಗೆ ಸಂಬಂಧಿಸಿದಂತೆ Table ನ ಕಾಲಂ 3 ರಲ್ಲಿ ನಮೂದಾಗಿರುವ ಪದನಾಮವನ್ನು ತಿದ್ದಿ ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

| ಕ್ರ.ಸಂ. | 18.08.2011ರ ಆದೇಶದಲ್ಲಿ ನಮೂದಾಗಿರುವ ಪದನಾಮ | ಈಗ ತಿದ್ದಿ ಓದಿಕೊಳ್ಳಬೇಕಾದ ಉನ್ನತೀಕರಿಸಿರುವ ಹುದ್ದೆಯ ಪದನಾಮ |
|---|---|---|
| 1 | 2 | 3 |
| 4 | ಸರ್ಕಾರದ ಉಪ ಕಾರ್ಯದರ್ಶಿ, ಯೋಜನಾ ಇಲಾಖೆ, ಬೆಂಗಳೂರು | ಸರ್ಕಾರದ ಜಂಟಿ ಕಾರ್ಯದರ್ಶಿ, ಯೋಜನಾ ಇಲಾಖೆ, ಬೆಂಗಳೂರು |
| 7 | ಮಾನ್ಯ ಮುಖ್ಯಮಂತ್ರಿಯವರ ಉಪ ಕಾರ್ಯದರ್ಶಿ, ಬೆಂಗಳೂರು | ಮಾನ್ಯ ಮುಖ್ಯಮಂತ್ರಿಯವರ ಜಂಟಿ ಕಾರ್ಯದರ್ಶಿ, ಬೆಂಗಳೂರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 470

**ವಡಗಾವೆ ಬಸವರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2)

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಎಂ.ಸಿ. ಕೃಷ್ಣಮೂರ್ತಿ, ಸಿವಿಲ್ ವಿಭಾಗದ ಉಪನ್ಯಾಸಕರು, ತಾಂತ್ರಿಕ ಶಿಕ್ಷಣ ಇಲಾಖೆ (ಅನಧಿಕೃತ ಗೈರು ಹಾಜರಾತಿಯಲ್ಲಿರುವ) ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** (1) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 15 ಡಿಇಕ್ಯೂ (1) 2007/2778 ದಿನಾಂಕ: 03/31-1-2008.

(2) ಸರ್ಕಾರದ ನೋಟೀಸ್ ಸಂಖ್ಯೆ:: ಇಡಿ 36 ಡಿಟಿಇ 2008, ದಿನಾಂಕ: 08-04-2008.

(3) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 13 ಡಿಇಕ್ಯೂ (1) 2005/5453 ದಿನಾಂಕ: 6/10-3-2010.

(4) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 18 ಡಿಇಕ್ಯೂ (1) 2007/1543 ದಿನಾಂಕ: 20/23-7-2010.

**ಪ್ರಸ್ತಾವನೆ :**

ಶ್ರೀ ಎಂ.ಸಿ. ಕೃಷ್ಣಮೂರ್ತಿ, ಇವರು ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ಖಾಲಿ ಇರುವ ಸಿವಿಲ್ ವಿಭಾಗದ ಉಪನ್ಯಾಸಕರ ಹುದ್ದೆಗೆ ದಿನಾಂಕ: 21-9-1987ರಂದು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿರುತ್ತಾರೆ. ನಂತರ ಇವರ ಸೇವೆಯನ್ನು ದಿನಾಂಕ: 20-2-1991ರಿಂದ ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಲಾಗಿರುತ್ತದೆ. ಸದರಿ ಉಪನ್ಯಾಸಕರು ಸರ್ಕಾರಿ ಸಿಪಿಸಿ ಪಾಲಿಟೆಕ್ನಿಕ್, ಮೈಸೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಇವರು ವಿದ್ಯಾರ್ಥಿಗಳು ತರಗತಿಗಳಿಗೆ ಹಾಜರಾಗಿದ್ದರೂ ಸಹ ಉದ್ದೇಶಪೂರ್ವಕವಾಗಿ ವಿದ್ಯಾರ್ಥಿಗಳ ಹಾಜರಾತಿಯನ್ನು ಕಡಿಮೆ ನೀಡಿ ಅಕ್ರಮವಾಗಿ ಹಣ ವಸೂಲಿ ಮಾಡುವುದರೊಂದಿಗೆ ವಿದ್ಯಾರ್ಥಿಗಳಿಗೆ ಅನ್ಯಾಯ ಎಸಗಿದ್ದಾರೆ ಎಂಬ ಬಗ್ಗೆ ಸಿಬ್ಬಂದಿಗಳಿಂದ ಬಂದ ಮನವಿಯ ಮೇರೆಗೆ ಪ್ರಾಥಮಿಕ ತನಿಖೆಯನ್ನು ನಡೆಸಿ ಸದರಿ ತನಿಖಾ ವರದಿಯ ಆಧಾರದ ಮೇಲೆ ಶ್ರೀ ಎಂ.ಸಿ. ಕೃಷ್ಣಮೂರ್ತಿ, ಸಿವಿಲ್ ವಿಭಾಗದ ಉಪನ್ಯಾಸಕರು ಇವರನ್ನು ಸರ್ಕಾರದ ಆದೇಶ ಸಂಖ್ಯೆ: ಇಡಿ 62 ಡಿಟಿಇ 2005 ದಿನಾಂಕ: 15-2-2006ರಂದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಗಳು ನಿಯಮ 10(1)ಡಿ ರನ್ವಯ ದಿನಾಂಕ: 26-11-2005 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಅಮಾನತ್ತಿನಲ್ಲಿಡಲಾಗಿತ್ತು.

ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ನಡೆಸಲು ತುಂಬಾ ಕಾಲಾವಕಾಶ ಬೇಕಾಗಿದ್ದುದರಿಂದ ಮತ್ತು ಅವರ ಅಮಾನತ್ತಿನ ಅವಧಿಯು 06 ತಿಂಗಳು ಪೂರ್ಣಗೊಂಡಿದ್ದರಿಂದ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಸರ್ಕಾರದ ಆದೇಶ ಸಂಖ್ಯೆ: ಇಡಿ 62 ಡಿಟಿಇ 2005 ದಿನಾಂಕ: 15-5-2006ರಲ್ಲಿ ಅಮಾನತ್ತನ್ನು ರದ್ದುಗೊಳಿಸಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿತ್ತು. ಆದರೆ ಶ್ರೀ ಎಂ.ಸಿ. ಕೃಷ್ಣಮೂರ್ತಿ ಇವರು ಸ್ಥಳ ನಿಯುಕ್ತಿಗೊಳಿಸಲಾದ ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ ಇಲ್ಲಿಗೆ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಶ್ರೀ ಎಂ.ಸಿ. ಕೃಷ್ಣಮೂರ್ತಿ, ಉಪನ್ಯಾಸಕರು ಅವರ ಅಮಾನತ್ತನ್ನು ರದ್ದುಪಡಿಸಿ ಕರ್ತವ್ಯಕ್ಕೆ ಸ್ಥಳನಿಯುಕ್ತಿಗೊಳಿಸಲಾದ ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ ಇಲ್ಲಿಗೆ ದೀರ್ಘಕಾಲದವರೆಗೆ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11ರ ಉಪಬಂಧಗಳಿಗನುಸಾರವಾಗಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸರ್ಕಾರದಲ್ಲಿ ತೀರ್ಮಾನಿಸಿ ಅವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನೋಟೀಸ್‌ನ ಮೂಲಕ ಜಾರಿ ಮಾಡಿ 15 ದಿನಗಳೊಳಗಾಗಿ ವಿವರಣೆಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಆದರೆ ಸದರಿಯವರು ಯಾವುದೇ ವಿವರಣೆಯನ್ನು ಸಲ್ಲಿಸಿರುವುದಿಲ್ಲ ಮತ್ತು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆದುದರಿಂದ, ಅವರ ಅನಧಿಕೃತ ಗೈರು ಹಾಜರಾತಿಯ ಬಗ್ಗೆ ದಿನಾಂಕ: 28-4-2010ರಂದು ವಿಜಯ ಕರ್ನಾಟಕ ಮತ್ತು ಕನ್ನಡಪ್ರಭ ದಿನಪತ್ರಿಕೆಗಳಲ್ಲಿ ಪ್ರಕಟಣೆ ನೀಡಿ ದಿನಾಂಕ: 8-4-2010ರಂದು ಜಾರಿ ಮಾಡಲಾದ ದೋಷಾರೋಪಣಾ ಪಟ್ಟಿಗೆ ಇದುವರೆವಿಗೂ ನೀವು ಯಾವುದೇ ಪ್ರತಿಕ್ರಿಯೆ ನೀಡದೆ ಇರುವುದರಿಂದ ಈ ನೋಟೀಸ್ ಪ್ರಕಟಣೆಯಾದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗಿ ನಿಮ್ಮ ರಕ್ಷಣಾತ್ಮಕ ಹೇಳಿಕೆಯನ್ನು ಲಿಖಿತ ಮೂಲಕ ತಿಳಿಸತಕ್ಕದ್ದು. ತಪ್ಪಿದ್ದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ ಏಕಪಕ್ಷೀಯವಾಗಿ ನಿಯಮಾನುಸಾರ ಮುಂದಿನ ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿತ್ತು. ಆದರೂ ಸಹ ಸದರಿ ಉಪನ್ಯಾಸಕರು ಯಾವುದೇ ಪ್ರತಿಕ್ರಿಯೆಯನ್ನು ನೀಡಿರುವುದಿಲ್ಲ.

ಆದುದರಿಂದ ಶ್ರೀ ಎಂ.ಸಿ. ಕೃಷ್ಣಮೂರ್ತಿ, ಸಿವಿಲ್ ವಿಭಾಗದ ಉಪನ್ಯಾಸಕರು (ಅನಧಿಕೃತ ಗೈರು ಹಾಜರಾತಿಯಲ್ಲಿರುವ) ಇವರು ದೀರ್ಘಕಾಲದಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರು ಎಂದು ಪರಿಗಣಿಸಿ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 89 ಡಿಟಿಇ 2011, ಬೆಂಗಳೂರು, ದಿನಾಂಕ: 25ನೇ ಜನವರಿ 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಂ.ಸಿ. ಕೃಷ್ಣಮೂರ್ತಿ, ಸಿವಿಲ್ ವಿಭಾಗದ ಉಪನ್ಯಾಸಕರು (ಅನಧಿಕೃತ ಗೈರು ಹಾಜರಾತಿಯಲ್ಲಿರುವ) ಮತ್ತು ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ ಇವರು ದೀರ್ಘಕಾಲದಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಇವರು ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರು ಎಂದು ಸರ್ಕಾರವು ಪರಿಗಣಿಸಿ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಗಳು ನಿಯಮ 8ರ ಉಪನಿಯಮ 8ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಬಿ.ಎನ್. ಜಗದೀಶ್

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

ಪಿ.ಆರ್. 471

## ಸಹಕಾರ ಸಚಿವಾಲಯ

**ವಿಷಯ :** 2011–12ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಶೀರ್ಷಿಕೆಯಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳಕ್ಕೆ ನಿಗದಿಪಡಿಸಿರುವ ಬಾಕಿ ಮೊತ್ತ ರೂ. 25.00 ಲಕ್ಷಗಳ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸಹಕಾರ ಸಂಘಗಳ ಅಪರ ನಿಬಂಧಕರವರ ಪತ್ರ ಸಂಖ್ಯೆ: ಅನಿ–ಕೈಸಸಂ–2–105–ಅಪ್ರ–2011–12, ದಿನಾಂಕ: 26.09.2011.

2. ಸರ್ಕಾರದ ಆದೇಶ ಸಂಖ್ಯೆ:: ಸಇ 23 ಸಂಮಾಸ 2011, ದಿನಾಂಕ: 16.12.2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರವರು ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳವು ಪ್ರಾರಂಭವಾದಾಗಿನಿಂದಲೂ ರಾಜ್ಯದ ಸಹಕಾರ ಕ್ಷೇತ್ರದ ಅಭಿವೃದ್ಧಿಗೆ ಪೂರಕವಾದ ಸಹಕಾರ ತರಬೇತಿ ಮತ್ತು ಶಿಕ್ಷಣ ಪ್ರಚಾರ ಮತ್ತು ಪ್ರಸಿದ್ಧ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಾ ಬಂದಿದೆ. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯದಲ್ಲಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರ ಎಂ.ಓ.ಯು ಗೆ ಸಹಿ ಮಾಡಿರುವುದರಿಂದ ಹಾಗೂ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 57(2–ಎ)ಕ್ಕೆ ತಿದ್ದುಪಡಿ ಜಾರಿಯಾದಲ್ಲಿ ಶೇಕಡಾ 2ರಷ್ಟು ಸಹಕಾರ ಶಿಕ್ಷಣ ನಿಧಿಯನ್ನು ಸಹಕಾರ ಮಹಾಮಂಡಳಕ್ಕೆ ಹಂಚಿಕೆ ಮಾಡದೇ ಇರುವ ಸಾಧ್ಯತೆ ಇರುವುದರಿಂದ, ಕೃಷಿ ಪತ್ತಿನ ಕ್ಷೇತ್ರದಿಂದ ಸಂಗ್ರಹವಾಗುತ್ತಿದ್ದ ಸುಮಾರು ರೂ. 1.61 ಕೋಟಿ ಸಹಕಾರ ಶಿಕ್ಷಣ ನಿಧಿ ಕೊರತೆ ಉಂಟಾಗುತ್ತದೆಂದೂ, ಈ ರೂ. 1.61 ಕೋಟಿಗಳ ಕೊರತೆಯನ್ನು ತುಂಬಲು ಸಹಾಯಧನ ಮಂಜೂರು ಮಾಡುವುದು ಸೂಕ್ತವಾಗಿರುವುದರಿಂದ, ಸಹಕಾರ ತರಬೇತಿ ಮತ್ತು ಶಿಕ್ಷಣ ಶೀರ್ಷಿಕೆಯಡಿಯಲ್ಲಿ 2011–12ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 75.00 ಲಕ್ಷಗಳ ಅನುದಾನವನ್ನು ಲೆಕ್ಕಶೀರ್ಷಿಕೆ 2425–00–003–0–02–101ರಡಿ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳಕ್ಕೆ ಬಿಡುಗಡೆ ಮಾಡುವಂತೆ ಕೋರಿದ್ದು, ಮೇಲೆ ಓದಲಾದ (2)ರಲ್ಲಿನ ಆದೇಶದಲ್ಲಿ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಪ್ರಸ್ತುತ ಬಾಕಿ ಇರುವ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಲು ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 23 ಸಂಮಾಸ 2011, ಬೆಂಗಳೂರು, ದಿನಾಂಕ: 24–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ವಯ 2011–12ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಲೆಕ್ಕಶೀರ್ಷಿಕೆ 2425–00–003–0–02 ಸಹಕಾರ ಮತ್ತು ಶಿಕ್ಷಣ –101– ಸಹಾಯಾನುದಾನ (ಯೋಜನೇತರ) ಅಡಿಯಲ್ಲಿ ಒದಗಿಸಿರುವ ಅನುದಾನ ರೂ. 75.00 ಲಕ್ಷಗಳಲ್ಲಿ ಬಿಡುಗಡೆ ಮಾಡಲು ಬಾಕಿ ಇರುವ ರೂ. 25.00 ಲಕ್ಷಗಳ (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ನ್ನು ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿಯಮಿತಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ಡ್ರಾ ಮಾಡುವ ಹಣ ಸಂದಾಯ ರಸೀದಿಯಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ರವರ ಸಹಿ ಮತ್ತು ಸಹಕಾರ ಸಂಘಗಳ ನಿಬಂದಕರು, ಕರ್ನಾಟಕ ರಾಜ್ಯ ಬೆಂಗಳೂರು ರವರ ಮೇಲು ಸಹಿ ಪಡೆದು ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: FD-1-TFP-2011, Dated: 28.09.2011 ರನ್ವಯ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣೆ ಸಂಖ್ಯೆ: ಆಇ II ವೆಚ್ಚ–2/2012, ದಿನಾಂಕ: 16.01.2012ರನ್ವಯ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 472

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ಸುತ್ತೋಲೆ**

**ಸಂಖ್ಯೆ : ಕಸಂವಾಪ್ರ 1401 ಕಸಧ 2011, ಬೆಂಗಳೂರು ದಿನಾಂಕ : 23–01–2012**

**ವಿಷಯ :** ಬರಪೀಡಿತ ಜಿಲ್ಲೆಗಳಲ್ಲಿ ಉತ್ಸವಗಳನ್ನು ಆಚರಿಸದೇ ಇರುವ ಬಗ್ಗೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ರಾಜ್ಯಾದ್ಯಂತ ಉತ್ಸವಗಳನ್ನು ಆಚರಿಸಲಾಗುತ್ತಿದೆ. ಇವುಗಳಲ್ಲಿ ಪ್ರತಿಷ್ಠಿತ ಬೃಹತ್ ಉತ್ಸವಗಳಾದ ಹಂಪಿ ಉತ್ಸವ ಹಾಗೂ ಕದಂಬೋತ್ಸವ, ಹೊಯ್ಸಳ ಉತ್ಸವ, ಚಾಲುಕ್ಯ ಉತ್ಸವ, ಲಕ್ಕುಂಡಿ ಉತ್ಸವ, ಕಿತ್ತೂರು ಉತ್ಸವ, ಧಾರವಾಡ ಉತ್ಸವ, ಬಸವ ಉತ್ಸವ, ಕನಕಗಿರಿ, ಆನೆಗುಂದಿ ಹಾಗೂ ಇತರೆ ಜಿಲ್ಲಾ ಉತ್ಸವಗಳು ಸೇರಿವೆ. 2011ನೇ ಸಾಲಿನಲ್ಲಿ ರಾಜ್ಯದಲ್ಲಿ ಮಳೆಯ ಅಭಾವದಿಂದಾಗಿ ರಾಜ್ಯದ 99 ತಾಲ್ಲೂಕುಗಳನ್ನು ಬರಪೀಡಿತ ತಾಲ್ಲೂಕುಗಳೆಂದು ಘೋಷಿಸಲಾಗಿದೆ. ಇಂತಹ ಜಿಲ್ಲೆಗಳಲ್ಲಿ ಉತ್ಸವ, ವೈಭವ ಮತ್ತು ಸಂಭ್ರಮದಂತಹ ಕಾರ್ಯಕ್ರಮಗಳನ್ನು ಸರ್ಕಾರದ ವತಿಯಿಂದ ಆಚರಿಸುವುದು ಸೂಕ್ತವಲ್ಲವೆಂದು ಸರ್ಕಾರವು ನಿರ್ಣಯಿಸಿದೆ. ಈ ಬರಪೀಡಿತ ಜಿಲ್ಲೆ ಹಾಗೂ ತಾಲ್ಲೂಕುಗಳಲ್ಲಿ 2011–12ನೇ ಸಾಲಿನಲ್ಲಿ ಇಂತಹ ಉತ್ಸವಗಳನ್ನು ಈ ವರ್ಷ ಆಚರಿಸುವುದನ್ನು ತಕ್ಷಣದಿಂದ ಕೈಬಿಡುವಂತೆ ಈ ಮೂಲಕ ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ.

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

ಪಿ.ಆರ್. 473

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧಿಕಾರಿಗಳಿಗೆ ವಿಶೇಷ ಆರ್ಥಿಕ ಅಧಿಕಾರ ನೀಡುವ ಬಗ್ಗೆ–ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಟಿಎಫ್‌ಪಿ 2010, ದಿನಾಂಕ : 30–04–2010.
2. ಅ.ಸ.ಪತ್ರ ಸಂಖ್ಯೆ : ಕಸನಿ/29/ಲೆಕ್ಕ–4/2009–10, ದಿನಾಂಕ : 22–08–2009.
3. ದಿನಾಂಕ : 22–11–2011 ರಂದು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 30–04–2010ರ ಆದೇಶದಲ್ಲಿ ಸರ್ಕಾರದ ಇಲಾಖೆಯ ಇಲಾಖಾ ಮುಖ್ಯಸ್ಥರುಗಳಿಗೆ ಹಾಗೂ ವಿವಿಧ ಮಟ್ಟದ ಅಧಿಕಾರಿಗಳಿಗೆ ಆರ್ಥಿಕ ಅಧಿಕಾರವನ್ನು ಪರಿಷ್ಕರಿಸಿ ಪ್ರತ್ಯಾಯೋಜಿಸಲಾಗಿದೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ಕನ್ನಡ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರೋತ್ಸಾಹ ನೀಡುವ ಇಲಾಖೆಯಾಗಿದ್ದು, ಇಲಾಖೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಸಂಘ ಸಂಸ್ಥೆಗಳಿಗೆ, ಸಾಹಿತ್ಯಿಕ ಸಂಸ್ಥೆಗಳಿಗೆ ಕಾರ್ಯಕ್ರಮಗಳನ್ನು ಸಕಾಲದಲ್ಲಿ ಪರಿಣಾಮಕಾರಿಯಾಗಿ ನಡೆಸಲು ಹೆಚ್ಚಿನ ಆರ್ಥಿಕ ಅಧಿಕಾರ ನೀಡುವಂತೆ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ವಿಷಯದ ಬಗ್ಗೆ ದಿನಾಂಕ : 22–11–2011 ರಂದು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 112 ಕಸನಿ 2009, ಬೆಂಗಳೂರು, ದಿನಾಂಕ : 23–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರು/ನಿರ್ದೇಶಕರು ಹಾಗೂ ಜಿಲ್ಲಾ ಮಟ್ಟದ ಅಧಿಕಾರಿಗಳಾದ ಸಹಾಯಕ ನಿರ್ದೇಶಕರುಗಳಿಗೆ ಅನುಬಂಧದಲ್ಲಿ ಸೂಚಿಸಿದಂತೆ ವಿಶೇಷ ಆರ್ಥಿಕ ಅಧಿಕಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಆಇ/519/ವೆಚ್ಚ–7/2011, ದಿನಾಂಕ : 28–12–2011 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಉಪ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

## ದಿನಾಂಕ 23–01–2012ರ ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 112 ಕಸನಿ 2009ರ

## ಅನುಬಂಧ

| ಕ್ರಮ ಸಂಖ್ಯೆ | ವಿಶೇಷ ಆರ್ಥಿಕ ಅಧಿಕಾರದ ವಿಷಯಗಳು | ಪ್ರತ್ಯಾಯೋಜಿಸಿದ ಅಧಿಕಾರ | |
|---|---|---|---|
| | | ಆಯುಕ್ತರು/ನಿರ್ದೇಶಕರು | ಸಹಾಯಕ ನಿರ್ದೇಶಕರು |
| 1. | ನೋಂದಾಯಿತ ಸಂಘ ಸಂಸ್ಥೆಗಳಿಗೆ ಸಾಹಿತ್ಯ ಸಾಂಸ್ಕೃತಿಕ ಹಾಗೂ ಕನ್ನಡ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಸಹಾಯಧನ | ಪ್ರತಿಯೊಂದು ನೋಂದಾಯಿತ ಸಂಸ್ಥೆಗೆ ಪ್ರತಿ ಕಾರ್ಯಕ್ರಮಕ್ಕೆ ರೂ. 1.00 ಲಕ್ಷ ಗರಿಷ್ಠ ಹಾಗೂ ಮಾಸಿಕ ರೂ. 50.00 ಲಕ್ಷ ಮೀರದಂತೆ ಬಿಡುಗಡೆ ಮಾಡುವುದು. | ಪ್ರತಿಯೊಂದು ನೋಂದಾಯಿತ ಸಂಸ್ಥೆಗೆ/ಪ್ರತಿ ಕಾರ್ಯಕ್ರಮಕ್ಕೆ ರೂ. 10,000/– ಗರಿಷ್ಠ ಹಾಗೂ ಮಾಸಿಕ ರೂ. 1.00ಲಕ್ಷ ಮೀರದಂತೆ ಬಿಡುಗಡೆ ಮಾಡುವುದು. |
| 2. | ಸರ್ಕಾರದಿಂದ ರಚಿಸಲಾದ ಟ್ರಸ್ಟ್‌ಗಳಿಗೆ ಅನುದಾನ (ಕ್ರಿಯಾ ಯೋಜನೆಯಲ್ಲಿ ಸೇರಿದ್ದಲ್ಲಿ) | ಕ್ರಿಯಾ ಯೋಜನೆಗೆ ಆಯುಕ್ತರಿಂದ ಅನುಮೋದನೆ ಪಡೆದಿದ್ದಲ್ಲಿ ಒಟ್ಟು ಅನುದಾನವನ್ನು ಎರಡು ಕಂತುಗಳಲ್ಲಿ ಹಣ ಬಳಕೆ ಪ್ರಮಾಣ ಪತ್ರ, ಲೆಕ್ಕ ಪರಿಶೋಧಕರ ವರದಿ ಪಡೆಯುವ ಷರತ್ತಿಗೊಳಪಟ್ಟು ಬಿಡುಗಡೆ ಮಾಡುವುದು. | --- |
| 3. | ನೋಂದಾಯಿತ ಸಂಘ ಸಂಸ್ಥೆಗಳಿಗೆ ಸಾಂಸ್ಕೃತಿಕ/ಬಯಲು ರಂಗಮಂದಿರ ನಿರ್ಮಾಣಕ್ಕೆ ಸಹಾಯಧನ | ಕ್ರಿಯಾಯೋಜನೆಗೆ ಸರ್ಕಾರದ ಅನುಮೋದನೆ ಪಡೆದು ರೂ. 5.00ಲಕ್ಷಗಳವರೆಗೆ ಸಹಾಯಧನ ಬಿಡುಗಡೆ ಮಾಡುವುದು. | --- |
| 4. | ಪರಿಶಿಷ್ಟ ಜಾತಿ ಉಪಯೋಜನೆ/ಪರಿಶಿಷ್ಟ ಪಂಗಡ ಉಪಯೋಜನೆಯಡಿ ನೋಂದಾಯಿತ ಸಂಘ ಸಂಸ್ಥೆಗಳಿಗೆ ಸಾಹಿತ್ಯ ಸಾಂಸ್ಕೃತಿಕ ಹಾಗೂ ಕನ್ನಡ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸಹಾಯಧನ | ಪ್ರತಿಯೊಂದು ಸಂಸ್ಥೆಗೆ/ಪ್ರತಿ ಕಾರ್ಯಕ್ರಮಕ್ಕೆ ಗರಿಷ್ಠ ರೂ. 1.00 ಲಕ್ಷ ಹಾಗೂ ಮಾಸಿಕ ರೂ. 50.00 ಲಕ್ಷಕ್ಕೆ ಮೀರದಂತೆ ಬಿಡುಗಡೆ ಮಾಡುವುದು. | ಪ್ರತಿಯೊಂದು ಸಂಸ್ಥೆಗೆ/ಪ್ರತಿ ಕಾರ್ಯಕ್ರಮಕ್ಕೆ ಗರಿಷ್ಠ ರೂ. 10,000/– ಹಾಗೂ ಮಾಸಿಕ ರೂ. 1.00ಲಕ್ಷಕ್ಕೆ ಮೀರದಂತೆ ಬಿಡುಗಡೆ ಮಾಡುವುದು. |

| | | | |
|---|---|---|---|
| 5. | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಉಪಯೋಜನೆಯಡಿ ಸಂಘ ಸಂಸ್ಥೆಗಳಿಗೆ, ಸಾಂಸ್ಕೃತಿಕ ಹಾಗೂ ಬಯಲು ರಂಗಮಂದಿರ ನಿರ್ಮಾಣಕ್ಕೆ ಸಹಾಯಧನ | ಕ್ರಿಯಾಯೋಜನೆಗೆ ಸರ್ಕಾರದ ಅನುಮೋದನೆ ಪಡೆದು ರೂ. 5.00 ಲಕ್ಷಗಳವರೆಗೆ ಬಿಡುಗಡೆ ಮಾಡುವುದು. | --- |
| 6. | ಅಕಾಡೆಮಿಗಳಿಗೆ ಅನುದಾನ (ಕ್ರಿಯಾಯೋಜನೆಯಲ್ಲಿ ಸೇರಿದ್ದಲ್ಲಿ) | ಆಯವ್ಯಯ ಅವಕಾಶದ ಮಿತಿಯೊಳಗೆ ಒಟ್ಟು ಅನುದಾನವನ್ನು 2 ಕಂತಿನಲ್ಲಿ ಹಣ ಬಳಕೆ ಪ್ರಮಾಣ ಪತ್ರ, ಲೆಕ್ಕಪರಿಶೋಧಕರ ವರದಿ ಪಡೆಯುವ ಷರತ್ತಿಗೊಳಪಟ್ಟು ಬಿಡುಗಡೆ ಮಾಡುವುದು. | --- |
| 7. | ಪ್ರಾಯೋಜಿತ ಕಾರ್ಯಕ್ರಮಗಳು, ಯುವ ಸೌರಭ, ಚಿಗುರು, ಕಾವ್ಯ, ಕಾವೇರಿ ಮನೆಯಂಗಳದಲ್ಲಿ ಮಾತುಕತೆ ಇತ್ಯಾದಿ ಸರ್ಕಾರಿ ಕಾರ್ಯಕ್ರಮಗಳಿಗೆ ಅನುದಾನ | ಆಯವ್ಯಯ ಅವಕಾಶದ ಮಿತಿಯೊಳಗೆ ಪ್ರತಿಯೊಂದು ಕಾರ್ಯಕ್ರಮಕ್ಕೆ ರೂ. 10,00 ಲಕ್ಷಗಳವರೆಗೆ ಬಿಡುಗಡೆ ಮಾಡುವುದು. | ಪ್ರತಿಯೊಂದು ಅನುಮೋದಿತ ಕಾರ್ಯಕ್ರಮಕ್ಕೆ ರೂ. 50,000/– ಮೀರದಂತೆ ಬಿಡುಗಡೆ ಮಾಡುವುದು. |
| 8. | ಕನ್ನಡ ಭವನ, ರವೀಂದ್ರ ಕಲಾಕ್ಷೇತ್ರ, ಜಿಲ್ಲಾ ರಂಗಮಂದಿರಗಳ ದುರಸ್ತಿ/ನಿರ್ವಹಣೆ ಇತ್ಯಾದಿ | ಪ್ರತಿ ರಂಗಮಂದಿರ/ಭವನ/ ಕಲಾಕ್ಷೇತ್ರಗಳಿಗೆ ರೂ. 20.00 ಲಕ್ಷ ಮೀರದಂತೆ ಅನುದಾನ ಬಿಡುಗಡೆ ಮಾಡುವುದು. | --- |
| 9. | ಹಸ್ತಪ್ರತಿ ಮುದ್ರಣಕ್ಕೆ ಧನಸಹಾಯ | ಪ್ರತಿ ಹಸ್ತ ಪ್ರತಿ ಮುದ್ರಣಕ್ಕೆ ರೂ. 50,000/– ಮೀರದಂತೆ ಅನುದಾನ ಬಿಡುಗಡೆ ಮಾಡುವುದು. | --- |
| 10. | ಸಂಘ ಸಂಸ್ಥೆಗಳು, ಉತ್ಸವ ಸಮಿತಿಗಳು ಹಮ್ಮಿಕೊಳ್ಳುವ ಸಾಂಸ್ಕೃತಿಕ, ಸಾಹಿತ್ಯ, ನಾಟಕ ಇತ್ಯಾದಿ ಕಾರ್ಯಕ್ರಮಗಳಿಗೆ ತಂಡಗಳ ಪ್ರಾಯೋಜನೆ | ಪ್ರತಿ ಕಾರ್ಯಕ್ರಮಕ್ಕೆ 5 ವಿವಿಧ ತಂಡಗಳನ್ನು ಗರಿಷ್ಠ ರೂ. 1.00 ಲಕ್ಷ ಆರ್ಥಿಕ ಮಿತಿಯೊಳಗೆ ಪ್ರಾಯೋಜಿಸುವುದು. | --- |
| 11. | ಇಲಾಖಾ ಪ್ರಕಟಣೆಗಳು, ಕಿರುಹೊತ್ತಿಗೆಗಳು ಮುದ್ರಣ, ಪ್ರಕಟಿತ ಸೃಜನೇತರ ಕೃತಿಗಳಿಗೆ ಸಹಾಯಧನ | ಸರ್ಕಾರದ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 2010, ದಿನಾಂಕ : 30–04–2010ರ ಕ್ರಮ ಸಂಖ್ಯೆ 19(1) ಮತ್ತು (11) ರಲ್ಲಿರುವಂತೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ. | --- |

**ಷರತ್ತುಗಳು :–**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ರನ್ವಯ ಹಾಗೂ ಸಂಬಂಧಪಟ್ಟ ನಿಯಮಗಳನ್ನು ಪಾಲಿಸುವುದು.
2. ಅನುದಾನದ ಲಭ್ಯತೆ ಆರ್ಥಿಕ ಅಧಿಕಾರ ಮಿತಿ ಮತ್ತು ಆರ್ಥಿಕ ಮಿತವ್ಯಯ ಆದೇಶ ಇವುಗಳನ್ನು ಗಮನದಲ್ಲಿಟ್ಟುಕೊಂಡು ಆರ್ಥಿಕ ಅಧಿಕಾರಗಳನ್ನು ಚಲಾಯಿಸತಕ್ಕದ್ದು.
3. ಸರ್ಕಾರೇತರ ಸಂಸ್ಥೆಗಳಿಗೆ ಅನುದಾನದ ಬಿಡುಗಡೆ ಮಾಡುವಾಗ ಹಣದ ಸದುಪಯೋಗ ಆಗುವಂತೆ ನೋಡಿಕೊಳ್ಳುವುದು ಹಾಗೂ ಅನುದಾನ ಸದ್ಬಳಕೆಯಾಗಿರುವ ಬಗ್ಗೆ ಸರಿಯಾದ ಲೆಕ್ಕಪತ್ರಗಳನ್ನು ಇಡುವುದರ ಜೊತೆಗೆ ಲೆಕ್ಕಪರಿಶೋಧನೆ ಮಾಡತಕ್ಕದ್ದು.

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಉಪ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

ಪಿ.ಆರ್. 474

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕೆಹೆಚ್‌ಎಸ್‌ಡಿಆರ್‌ಪಿ ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ವೇತನ ಶ್ರೇಣಿ ರೂ. 20025–28275 ಯನ್ನು ಹೊಂದಿರುವ ಅಧಿಕಾರಿಗಳಿಗೆ ನಿವಾಸಕ್ಕೆ ದೂರವಾಣಿ ಸೌಲಭ್ಯವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಪಿಸಿ/ಓಎಸ್‌ಡಿ–3/2000–01, ದಿನಾಂಕ : 04–11–2000.

2. ಸರ್ಕಾರದ ತಿದ್ದೋಲೆ ಸಂಖ್ಯೆ : ಆ.ಇ4 ಬಿ.ಇ.ಎಂ. 2007, ದಿನಾಂಕ : 10–09–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ವಿಶೇಷ ಕರ್ತವ್ಯಾಧಿಕಾರಿಗಳಿಗೆ ನಿವಾಸಕ್ಕೆ ದೂರವಾಣಿ ಸೌಲಭ್ಯವನ್ನು ಎಸ್‌ಟಿಡಿ ಕರೆಗಳನ್ನು ಹೊರತುಪಡಿಸಿ ಒದಗಿಸುವ ಬಗ್ಗೆ ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ತಿದ್ದೋಲೆಯನ್ವಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಿರುವ ಹಿನ್ನೆಲೆಯಲ್ಲಿ ವೇತನ ಶ್ರೇಣಿ (ರೂ. 20025–28275) ಯನ್ನು ಹೊಂದಿರುವ ಸರ್ಕಾರಿ ಅಧಿಕಾರಿಗಳು ಕಛೇರಿಯ ಹಾಗೂ ನಿವಾಸದ ದೂರವಾಣಿಗಳನ್ನು ಹೊಂದಲು ಅರ್ಹರಾಗಿರುತ್ತಾರೆಂದು ಮಾರ್ಪಡಿಸಿದೆ.

ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ಕಾರ್ಯಕ್ರಮಾಧಿಕಾರಿಗಳಿಗೆ ಇದೇ ರೀತಿಯ ಸೌಲಭ್ಯವನ್ನು ಒದಗಿಸುವ ಬಗ್ಗೆ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕೆಹೆಚ್ಎಸ್‌ಡಿಆರ್‌ಪಿ/ಸಿಎಓ/10/ದೂರವಾಣಿ/11–12, ಬೆಂಗಳೂರು, ದಿನಾಂಕ : 05–01–2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿ ಕಾರ್ಯ ನಿರ್ವಹಿಸುತ್ತಿರುವ ವೇತನ ಶ್ರೇಣಿ ರೂ. 20025–28275 ಹಾಗೂ ಅದಕ್ಕಿಂತ ಮೇಲ್ಪಟ್ಟ ವೇತನ ಶ್ರೇಣಿಯನ್ನು ಹೊಂದಿರುವ ಸರ್ಕಾರಿ ಅಧಿಕಾರಿಗಳು ಮತ್ತು ಯೋಜನೆಯ ಎಲ್ಲಾ ಕಾರ್ಯಕ್ರಮಾಧಿಕಾರಿಗಳ ನಿವಾಸದ ದೂರವಾಣಿ ವೆಚ್ಚ ಮತ್ತು ಬ್ರಾಡ್‌ಬ್ಯಾಂಡ್ ಇಂಟರ್‌ನೆಟ್ ವೆಚ್ಚವೂ ಸೇರಿದಂತೆ ಮಾಸಿಕ ಗರಿಷ್ಠ ವೆಚ್ಚ ರೂ. 1200–00 ಗಳಿಗೆ ಸೀಮಿತಗೊಳಿಸಿ ಯೋಜನೆಯಿಂದ ಭರಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎನ್. ರಮೇಶ್**

ಸರ್ಕಾರದ ಉಪ ಕಾರ್ಯದರ್ಶಿ (ಪ್ರ)

ಕೆಹೆಚ್ಎಸ್‌ಡಿಆರ್‌ಪಿ

ಪಿ.ಆರ್. 475 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ಕೊಪ್ಪ ಅರಣ್ಯ ವಿಭಾಗದಿಂದ ಹೂಬಿಟ್ಟ ಮತ್ತು ಒಣ ಬೊಂಬುಗಳನ್ನು ಕಡಿತಲೆ ಮಾಡಿ ಸಾಗಾಣಿಕೆ ಮಾಡಲು ಕಾಲಾವಕಾಶ ವಿಸ್ತರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 16 ಎಫ್‌ಡಿಪಿ 2008, ದಿನಾಂಕ: 03/12/2008.
2. ಸರ್ಕಾರದ ಪತ್ರ ಸಂಖ್ಯೆ: ಅಪಜೀ 16 ಎಫ್‌ಡಿಪಿ 2008, ದಿನಾಂಕ: 18/01/2010.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು ಇವರ ಪತ್ರ ಸಂಖ್ಯೆ: ಎ7/ಬಿಎಂಜಿ/ಸಿಆರ್–103:2010–11, ದಿನಾಂಕ: 11/12–1–2012.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಮೈಸೂರು ಕಾಗದ ಕಾರ್ಖಾನೆಗೆ 80,000 ಮೆಟ್ರಿಕ್ ಟನ್ ಹೂಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಪ್ರತಿ ಮೆಟ್ರಿಕ್ ಟನ್‌ಗೆ ರೂ. 300–00 ಸೀನಿಯರೇಜ್ ದರದಲ್ಲಿ ಒದಗಿಸಲು ಆದೇಶ ಮಾಡಲಾಗಿತ್ತು. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಹೂಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಲಭ್ಯತೆಯ ಆಧಾರದ ಮೇಲೆ ಕಟಾವು ಮಾಡಿ ಒದಗಿಸಲು ಕಾಲಾವಕಾಶವನ್ನು ಮೇ 2011ರವರೆಗೆ ವಿಸ್ತರಿಸಲಾಗಿತ್ತು. ಮೇಲೆ (3) ರಲ್ಲಿ ಓದಲಾದ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು ಇವರ ಪತ್ರಗಳಲ್ಲಿ ಈವರೆವಿಗೆ 7,775 ಮೆಟ್ರಿಕ್ ಟನ್ ಕಟಾವಣೆ ಮತ್ತು ಸಾಗಾಣಿಕೆ ಮಾಡಲಾಗಿದ್ದು ಉಳಿಕೆ 72,225 ಮೆಟ್ರಿಕ್ ಟನ್ (ಎಪ್ಪತ್ತೆರಡು ಸಾವಿರದ ಇನ್ನೂರ ಇಪ್ಪತ್ತೈದು ಮಾತ್ರ) ಒಣ ಬೊಂಬುಗಳ ಸಂಗ್ರಹಣೆ ಕಾಮಗಾರಿಯನ್ನು ಪೂರ್ಣಗೊಳಿಸಲು ಈ ಕೆಳಕಂಡಂತೆ ಕಾಲಾವಕಾಶವನ್ನು ದಿನಾಂಕ: 30/06/2012ರ ವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಮಾರ್ಚ್ 2012ರ ಅಂತ್ಯದವರೆಗೆ ಬಾಕಿ ಉಳಿದ ಸಂಗ್ರಹಣೆಯ ಶೇ.50 ರಷ್ಟು

ಮೇ 2012ರ ಅಂತ್ಯದವರೆಗೆ ಬಾಕಿ ಉಳಿದ ಸಂಗ್ರಹಣೆಯ ಶೇ. 25 ರಷ್ಟು

ಜೂನ್ 2012ರ ಅಂತ್ಯದವರೆಗೆ ಬಾಕಿ ಉಳಿದ ಸಂಗ್ರಹಣೆಯ ಶೇ.25 ರಷ್ಟು

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 96 ಎಫ್‌ಡಿಪಿ 2011 ಬೆಂಗಳೂರು, ದಿನಾಂಕ: 21/01/2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ 2010–11ನೇ ಸಾಲಿನಲ್ಲಿ ಮೆ: ಮೈಸೂರು ಕಾಗದ ಕಾರ್ಖಾನೆಗೆ 80,000 ಮೆಟ್ರಿಕ್ ಟನ್ ಒಣಗಿದ ಮತ್ತು ಹೂ ಬಿಟ್ಟ ಬೊಂಬುಗಳ ಹಂಚಿಕೆ ಮಾಡಿದ್ದು ಅದರಲ್ಲಿ ಬಾಕಿ ಇರುವ 72,225.00 (ಎಪ್ಪತ್ತೆರಡು ಸಾವಿರದ ಇನ್ನೂರ ಇಪ್ಪತ್ತೈದು) ಮೆಟ್ರಿಕ್ ಟನ್ ಒಣ ಬೊಂಬು ಸಂಗ್ರಹಣೆಯ ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗದಿ ಮಾಡಿದಂತಹ ಅವಧಿಯನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಕೋರಿಕೆಯ ಮೇರೆಗೆ ಈ ಕೆಳಕಂಡಂತೆ ವಿಸ್ತರಿಸಿದೆ.

ಮಾರ್ಚ್ 2012ರ ಅಂತ್ಯದವರೆಗೆ ಬಾಕಿ ಉಳಿದ ಸಂಗ್ರಹಣೆಯ ಶೇ.50 ರಷ್ಟು

ಮೇ 2012ರ ಅಂತ್ಯದವರೆಗೆ ಬಾಕಿ ಉಳಿದ ಸಂಗ್ರಹಣೆಯ ಶೇ.25 ರಷ್ಟು

ಜೂನ್ 2012ರ ಅಂತ್ಯದವರೆಗೆ ಬಾಕಿ ಉಳಿದ ಸಂಗ್ರಹಣೆಯ ಶೇ.25 ರಷ್ಟು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಆರ್. ಅನಂತರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 476 ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕು ನಾಗಠಾಣ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ಅಂದಾಜಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010, ದಿನಾಂಕ: 28/09/2011.

2. ದಿನಾಂಕ: 18/01/2011 ರ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2011–12/265, ದಿನಾಂಕ: 18/01/2012.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹದಿಮೂರನೇ ಹಣಕಾಸು ಆಯೋಗದಡಿ ರೂ.350.00 ಕೋಟಿ ಅಂದಾಜು ವೆಚ್ಚದ 631 ಕಾಮಗಾರಿಗಳ ಅನುಷ್ಠಾನಕ್ಕೆ ಅನುಮೋದನೆ ನೀಡಲಾಗಿದೆ. ಇದರಲ್ಲಿ ರೂ.264.00 ಲಕ್ಷಗಳ ಅಂದಾಜುಮೊತ್ತದ ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕು ನಾಗಠಾಣ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯು ಸೇರಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ರವರು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಕಾಮಗಾರಿಯ ಅಂದಾಜು ಪಟ್ಟಿಯನ್ನು 2011–12ನೇ ಸಾಲಿಗೆ ಮುಂದುವರೆಸಿರುವ 2010–11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ತಯಾರಿಸಲಾಗಿದೆ. ಇದರಲ್ಲಿ ಕೆರೆಯ ಏರಿ, ತೂಬು ಹಾಗೂ ಕೋಡಿ ದುರಸ್ತಿ, ನಾಲೆಗಳ ಮತ್ತು ಉಪಕಾಲುವೆಗಳ ದುರಸ್ತಿ ಔಟ್‌ಲೆಟ್ ಹಾಗೂ ಸಿ.ಡಿ. ಕಾಮಗಾರಿ ಇತ್ಯಾದಿಗಳನ್ನು ಕೈಗೊಳ್ಳಲು ಅವಕಾಶ ಮಾಡಿದೆ.

ಲೆಕ್ಕಶೀರ್ಷಿಕೆ "4702–00–101–1–12–059–XIII ನೇ ಹಣಕಾಸು ಆಯೋಗದ ಅನುದಾನದಡಿ ಕೃಷಿಗೆ ನೇರವಾಗಿ ಸಂಬಂಧಿಸಿದ ಕೆರೆ ನೀರಾವರಿ ಯೋಜನೆಗಳ ಜೀರ್ಣೋದ್ಧಾರ–ಇತರ ಖರ್ಚುಗಳು" ರಡಿ ರೂ. 264.00 ಲಕ್ಷಗಳ ಅಂದಾಜುಮೊತ್ತದ ಈ ಕಾಮಗಾರಿಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2011 (ತಾಂತ್ರಿಕ) (3) ಬೆಂಗಳೂರು, ದಿನಾಂಕ: 27ನೇ ಜನವರಿ 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕು ನಾಗಠಾಣ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ರೂ. 264.00 ಲಕ್ಷ (ರೂ. ಇನ್ನೂರ ಅರವತ್ತನಾಲ್ಕು ಲಕ್ಷ ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ಅನುಷ್ಠಾನ ಪೂರ್ವ ಹಾಗೂ ಅನುಷ್ಠಾನ ನಂತರದ ಫಲಶೃತಿಗಳನ್ನು ಹಾಗೂ ಕಾಮಗಾರಿಯ ವಿವಿಧ ಹಂತಗಳ ವಿಡಿಯೋ ಹಾಗೂ ಛಾಯಾಚಿತ್ರಗಳನ್ನು ದಾಖಲಿಸುವುದು.
2. ಈ ಕಾಮಗಾರಿಯ ಅಂದಾಜುನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯಲ್ಲಿ ಮಂಡಿಸಿ ತೀರುವಳಿ ಪಡೆಯುವುದು.
3. ಅಂದಾಜಿಗೆ ತೀರುವಳಿ ನೀಡುವಾಗ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಗಮನಿಸಿರುವ ಅಂಶಗಳಂತೆ ಕ್ರಮ ಕೈಗೊಳ್ಳತಕ್ಕದ್ದು.
4. ಯೋಜನೆಯ ಅನುಷ್ಠಾನ ಕುರಿತು 3ನೇ ವ್ಯಕ್ತಿ/ಸಂಸ್ಥೆಯ ತಪಾಸಣೆಗೆ ಒಳಪಡಿಸಿ, ವರದಿಯನ್ನು ಪಡೆಯುವುದು.
5. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
6. ಒಂದುವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
7. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
8. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
9. ಕಾಮಗಾರಿ ಪೂರ್ಣಗೊಂಡ ಕೂಡಲೇ ಪೂರ್ಣತಾ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
10. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
11. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
12. ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 477 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕು ಬರಟಗಿ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ಅಂದಾಜಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010, ದಿನಾಂಕ: 28/09/2011.

2. ದಿನಾಂಕ: 18/01/2011ರ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2011–12/265, ದಿನಾಂಕ: 18/01/2012.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹದಿಮೂರನೇ ಹಣಕಾಸು ಆಯೋಗದಡಿ ರೂ. 350.00 ಕೋಟಿ ಅಂದಾಜು ವೆಚ್ಚದ 631 ಕಾಮಗಾರಿಗಳ ಅನುಷ್ಠಾನಕ್ಕೆ ಅನುಮೋದನೆ ನೀಡಲಾಗಿದೆ. ಇದರಲ್ಲಿ ರೂ. 235.00 ಲಕ್ಷಗಳ ಅಂದಾಜುಮೊತ್ತದ ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕು ಬರಟಗಿ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯು ಸೇರಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ರವರು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಕಾಮಗಾರಿಯ ಅಂದಾಜು ಪಟ್ಟಿಯನ್ನು 2011–12ನೇ ಸಾಲಿಗೆ ಮುಂದುವರೆಸಿರುವ 2010–11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ತಯಾರಿಸಲಾಗಿದೆ. ಇದರಲ್ಲಿ ಕೆರೆಯ ಏರಿ, ತೂಬು ಹಾಗೂ ಕೋಡಿ ದುರಸ್ತಿ, ನಾಲೆಗಳ ಮತ್ತು ಉಪಕಾಲುವೆಗಳ ದುರಸ್ತಿ ಔಟ್‌ಲೆಟ್ ಹಾಗೂ ಸಿ.ಡಿ. ಕಾಮಗಾರಿ ಇತ್ಯಾದಿಗಳನ್ನು ಕೈಗೊಳ್ಳಲು ಅವಕಾಶ ಮಾಡಿದೆ.

ಲೆಕ್ಕಶೀರ್ಷಿಕೆ "4702–00–101–1–12–059– XIII ನೇ ಹಣಕಾಸು ಆಯೋಗದ ಅನುದಾನದಡಿ ಕೃಷಿಗೆ ನೇರವಾಗಿ ಸಂಬಂಧಿಸಿದ ಕೆರೆ ನೀರಾವರಿ ಯೋಜನೆಗಳ ಜೀರ್ಣೋದ್ಧಾರ–ಇತರ ಖರ್ಚುಗಳು" ರಡಿ ರೂ. 235.50 ಲಕ್ಷಗಳ ಅಂದಾಜುಮೊತ್ತದ ಈ ಕಾಮಗಾರಿಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2011 (ತಾಂತ್ರಿಕ) (2) ಬೆಂಗಳೂರು, ದಿನಾಂಕ: 23ನೇ ಜನವರಿ 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕು ಬರಟಗಿ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ರೂ.235.50 ಲಕ್ಷ (ರೂ. ಇನ್ನೂರ ಮೂವತ್ತೈದು ಲಕ್ಷ ಐವತ್ತು ಸಾವಿರ ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ಅನುಷ್ಠಾನ ಪೂರ್ವ ಹಾಗೂ ಅನುಷ್ಠಾನ ನಂತರದ ಫಲಶೃತಿಗಳನ್ನು ಹಾಗೂ ಕಾಮಗಾರಿಯ ವಿವಿಧ ಹಂತಗಳ ವೀಡಿಯೋ ಹಾಗೂ ಛಾಯಾಚಿತ್ರಗಳನ್ನು ದಾಖಲಿಸುವುದು.
2. ಈ ಕಾಮಗಾರಿಯ ಅಂದಾಜನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯಲ್ಲಿ ಮಂಡಿಸಿ ತೀರುವಳಿ ಪಡೆಯುವುದು.
3. ಅಂದಾಜಿಗೆ ತೀರುವಳಿ ನೀಡುವಾಗ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಗಮನಿಸಿರುವ ಅಂಶಗಳಂತೆ ಕ್ರಮ ಕೈಗೊಳ್ಳತಕ್ಕದ್ದು.
4. ಯೋಜನೆಯ ಅನುಷ್ಠಾನ ಕುರಿತು 3ನೇ ವ್ಯಕ್ತಿ/ಸಂಸ್ಥೆಯ ತಪಾಸಣೆಗೆ ಒಳಪಡಿಸಿ, ವರದಿಯನ್ನು ಪಡೆಯುವುದು.
5. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
6. ಒಂದುವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
7. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
8. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆ ದುಕೊಳ್ಳತಕ್ಕದ್ದು.
9. ಕಾಮಗಾರಿ ಪೂರ್ಣಗೊಂಡ ಕೂಡಲೇ ಪೂರ್ಣತಾ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
10. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
11. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
12. ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 478

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕು ಚಿತ್ತವಾಡಗಿ ಮದ್ಯಮ ನೀರಾವರಿ ಸುಧಾರಣೆ ಕಾಮಗಾರಿಯ ಅಂದಾಜಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010, ದಿನಾಂಕ: 28/09/2011.

2. ದಿನಾಂಕ: 18/01/2011ರ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2011–12/265, ದಿನಾಂಕ: 18/01/2012.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹದಿಮೂರನೇ ಹಣಕಾಸು ಆಯೋಗದಡಿ ರೂ. 350.00 ಕೋಟಿ ಅಂದಾಜು ವೆಚ್ಚದ 631 ಕಾಮಗಾರಿಗಳ ಅನುಷ್ಠಾನಕ್ಕೆ ಅನುಮೋದನೆ ನೀಡಲಾಗಿದೆ. ಇದರಲ್ಲಿ ರೂ. 407.00 ಲಕ್ಷಗಳ ಅಂದಾಜುಮೊತ್ತದ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕು ಚಿತ್ತವಾಡಗಿ ಮದ್ಯಮ ನೀರಾವರಿ ಸುಧಾರಣೆ ಕಾಮಗಾರಿಯು ಸೇರಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ರವರು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಕಾಮಗಾರಿಯ ಅಂದಾಜು ಪಟ್ಟಿಯನ್ನು 2011–12ನೇ ಸಾಲಿಗೆ ಮುಂದುವರೆಸಿರುವ 2010–11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ತಯಾರಿಸಲಾಗಿದೆ. ಇದರಲ್ಲಿ ಕೆರೆಯ ಏರಿ ದುರಸ್ತಿ, ಎಡದಂಡೆ ಹಾಗೂ ಬಲದಂಡೆ ನಾಲೆಗಳ ದುರಸ್ತಿ, ಉಪಕಾಲುವೆಗಳ ಮತ್ತು ಅಡ್ಡಮೋರಿಗಳ ದುರಸ್ತಿ ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳಲು ಅವಕಾಶ ಮಾಡಿದೆ. ಈ ಕಾಮಗಾರಿಯ ಅಂದಾಜಿಗೆ ದಿನಾಂಕ: 12/10/2011 ರಂದು ನಡೆದಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯಲ್ಲಿ ಕೆಲವು ಷರಾಗಳೊಂದಿಗೆ ತೀರುವಳಿ ನೀಡಲಾಗಿದೆ.

ಲೆಕ್ಕಶೀರ್ಷಿಕೆ "4702–00–101–1–12–059– XIII ನೇ ಹಣಕಾಸು ಆಯೋಗದ ಅನುದಾನದಡಿ ಕೃಷಿಗೆ ನೇರವಾಗಿ ಸಂಬಂಧಿಸಿದ ಕೆರೆ ನೀರಾವರಿ ಯೋಜನೆಗಳ ಜೀರ್ಣೋದ್ಧಾರ–ಇತರ ಖರ್ಚುಗಳು" ರಡಿ ರೂ. 407.00 ಲಕ್ಷಗಳ ಅಂದಾಜುಮೊತ್ತದ ಈ ಕಾಮಗಾರಿಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2011 (ತಾಂತ್ರಿಕ) (1) ಬೆಂಗಳೂರು, ದಿನಾಂಕ: 27ನೇ ಜನವರಿ 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕು ಚಿತ್ತವಾಡಗಿ ಮದ್ಯಮ ನೀರಾವರಿ ಸುಧಾರಣೆ ಕಾಮಗಾರಿಯ ರೂ.407.00 ಲಕ್ಷ (ರೂ. ನಾಲ್ಕು ನೂರ ಏಳು ಲಕ್ಷ ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ಅನುಷ್ಠಾನ ಪೂರ್ವ ಹಾಗೂ ಅನುಷ್ಠಾನ ನಂತರದ ಫಲಶೃತಿಗಳನ್ನು ಹಾಗೂ ಕಾಮಗಾರಿಯ ವಿವಿಧ ಹಂತಗಳ ವೀಡಿಯೋ ಹಾಗೂ ಛಾಯಾಚಿತ್ರಗಳನ್ನು ದಾಖಲಿಸುವುದು.
2. ಈ ಕಾಮಗಾರಿಯ ಅಂದಾಜನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯಲ್ಲಿ ಮಂಡಿಸಿ ತೀರುವಳಿ ಪಡೆಯುವುದು.
3. ಅಂದಾಜಿಗೆ ತೀರುವಳಿ ನೀಡುವಾಗ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಗಮನಿಸಿರುವ ಅಂಶಗಳಂತೆ ಕ್ರಮ ಕೈಗೊಳ್ಳತಕ್ಕದ್ದು.
4. ಯೋಜನೆಯ ಅನುಷ್ಠಾನ ಕುರಿತು 3ನೇ ವ್ಯಕ್ತಿ/ಸಂಸ್ಥೆಯ ತಪಾಸಣೆಗೆ ಒಳಪಡಿಸಿ, ವರದಿಯನ್ನು ಪಡೆಯುವುದು.
5. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
6. ಒಂದುವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
7. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
8. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆ ದುಕೊಳ್ಳತಕ್ಕದ್ದು.
9. ಕಾಮಗಾರಿ ಪೂರ್ಣಗೊಂಡ ಕೂಡಲೇ ಪೂರ್ಣತಾ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
10. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
11. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
12. ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 479

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಂ.ಎಸ್.ಜಯರಾಂ, ಜಂಟಿ ನಿರ್ದೇಶಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿಗಳಾದ ನ್ಯಾಯಮೂರ್ತಿ ಫ.ನಿ.ಗುಡ್ಡಾಕಾರ, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರಿಗೆ ಸಂಭಾವನೆ ಪಾವತಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಇ 114 ರಾಲೆಪ 2008 ದಿನಾಂಕ:03–09–2011.

2) ವಿಚಾರಣಾಧಿಕಾರಿಗಳ ಮನವಿ ಮತ್ತು ವಿಚಾರಣಾ ವರದಿ ದಿನಾಂಕ:20–12–2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್. ಜಯರಾಂ, ಜಂಟಿ ನಿಯಂತ್ರಕರು ಇವರು ಬೆಳಗಾವಿ ಜಿಲ್ಲಾ ಪಂಚಾಯತ್‌ನಲ್ಲಿ ಮುಖ್ಯ ಲೆಕ್ಕಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ವಿವಿಧ ಯೋಜನೆಗಳಡಿ ಅಭಿವೃದ್ಧಿ ಕಾರ್ಯಗಳಲ್ಲಿ ಅನುದಾನವನ್ನು ಬಿಡುಗಡೆ ಮಾಡಲು ಅನಗತ್ಯ ವಿಳಂಬ ಮಾಡುವ ಮೂಲಕ ಅಭಿವೃದ್ಧಿ ಕಾರ್ಯಗಳು ಕುಂಟಿತಗೊಳ್ಳಲು ಕಾರಣರಾದ; ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಹಾಗೂ ಕರ್ನಾಟಕ (ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ) ಕಾಯ್ದೆ 1999ರ ವಿಧಿ ವಿಧಾನಗಳನ್ನು ಪಾಲಿಸದೆ ಇದ್ದ ಪ್ರಯುಕ್ತ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಳ್ಳಲು ಕಾರಣರಾದ ಆರೋಪಕ್ಕೆ ಸಂಬಂಧಪಟ್ಟಂತೆ ಇಲಾಖಾ ವಿಚಾರಣೆ ನಡೆಸಲು ನ್ಯಾಯಮೂರ್ತಿ ಫ.ನಿ. ಗುಡ್ಡಾಕಾರ, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದ್ದು ಅವರು ವಿಚಾರಣೆ ನಡೆಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ 20–12–2011ರಲ್ಲಿ ವರದಿಯನ್ನು ಸಲ್ಲಿಸಿರುತ್ತಾರೆ ಈ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳು ಅರ್ಜಿ ಸಲ್ಲಿಸಿ ರೂ. 15,000/–ಗಳ ಸಂಭಾವನೆಯನ್ನು ಪಾವತಿಸುವಂತೆ ಕೋರಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 26 ಸೇಇವಿ 2011, ದಿನಾಂಕ26–7–2011ರಂತೆ ಪ್ರತಿ ಇಲಾಖಾ ವಿಚಾರಣೆಗೆ ರೂ.15,000/–ಗಳ ಸಂಭಾವನೆಯನ್ನು (ವಾಹನ ಭತ್ಯೆಯೂ ಸೇರಿರುತ್ತದೆ) ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ ವಿಚಾರಣಾಧಿಕಾರಿಗಳ ಸಂಭಾವನೆ ಪಾವತಿಸಲು ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 114 ರಾಲೆಪ 2008, ಬೆಂಗಳೂರು, ದಿನಾಂಕ: 23 ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ವಿಚಾರಣಾಧಿಕಾರಿಗಳಾದ ಶ್ರೀ ಫ.ನಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರು ಶ್ರೀ ಎಂ.ಎಸ್. ಜಯರಾಂ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಿದ್ದು, ವಿಚಾರಣೆಯ ಸಂಭಾವನೆಯಾಗಿ ರೂ.15,000/– (ಹದಿನೈದು ಸಾವಿರ ರೂಪಾಯಿಗಳು ಮಾತ್ರ) (ವಾಹನ ಭತ್ಯೆಯೂ ಸೇರಿರುತ್ತದೆ)ಗಳನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಸದರಿ ಮೊತ್ತವನ್ನು ರಾಜ್ಯ ಲೆಕ್ಕಪತ್ರ ಇಲಾಖೆ ಶೀರ್ಷಿಕೆ 2054–00–098–0–01, 015 ಪೂರಕ ವೆಚ್ಚಗಳು ಇದರಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಲ್.ರಮೇಶ**

ಪಿ.ಆರ್.481

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## INFRASTRUCTURE DEVELOPMENT SECRETARIAT

**Sub :** Project Management Services for Construction of Gulbarga Airport-Fees to iDeck

**Read :** 1. G.O. No. IDD 85 DIA 2008, Dated:12-8-2009.

2. Letter No. iDeck/2011-2012/886, Dated:16-9-2011.
3. G.O. No. IDD 85 DIA 2008, Dated:9-11-2011.
4. Govt. Notification No.FD 1121/Exp-12/11, Dated:27-12-2011.
5. Letter No. iDeCK/2011-12/875B, Dated:30-09-2011 of the President(Projects), iDeCK.
6. Letter No.iDeCK/2011-12/1322B, Dated:30-12-2011 of the President (Projects), iDeCK

**Preamble:**

In G.O. read at (1) above, Government has accorded approval for the scope of services and sanction for payment of fees to iDeck for project management and Consultancy services for Gulbarga Airport Development Project at the rate not exceeding of Rs.3,00,000 per month (exclusive of applicable service tax) for the project for a period of twelve months.

2. In letter read at (2) above, iDeck has stated that construction of Airport has been started only in April/May, 2011 and iDeck has deployed their engineers at site from 01-06-2011 for supervision and sent invoice for Rs9,92,700/- towards fees payable to iDeck for project management and consultancy services for the period June 2011 to August 2011 for the construction of Gulbarga Airport and requested for release of Rs.9,92,700/-

3. In G.O. read at (3) above, an amount of Rs.9,92,700/- has been released to iDeCK for the period of June 2011 to August 2011.

4. In Government Notification read at (4) above, exemption for procuring the services of iDeCK under the provisions of 4(g) of the KTPP Act 1999, for a period from January 2012 to August 2012 has been given.

5. In letters read at (5 & 6) above, the President (projects), iDeck had sent invoices for Rs.3,30,900/- and Rs.9,92,700/- towards payment of fees to iDeCK for project management and consultancy services for the months September 2011, to December 2011.

6. The proposal has been examined in detail and hence this order.

**Government Order No. IDD 85 DIA 2008 Bangalore, Dated: 28th January 2012.**

Under the circumstances explained in the preamble, Sanction is accorded for release of Rs.13,23,600/- (Rupees Thirteen lakhs twenty three thousand six hundred only) towards fees to iDeck for project Management and Consultancy Services for the Gulbarga Airport Project for the period September 2011 to December 2011.

2. This amount shall be met under the Head of Account "5465-01-190-1-05 (Plan)-133 Special Development Plan" out of the provision of Rs.80.00 Crores during 2011-12.

3. The Chief Financial Officer, iDeCK, Bangalore is authorized to draw the above amount on a pyees receipt duly countersinged by the under secretary to Government, Infrastructure Development, Bangalore.

4. This order issues in accordance with the financial powers delegated to Principal Secretaries/Secretaries to Government vide G.O. No. FD 1 TFP 2008, dated 16-05-2008 and Finance Department Notification No.: FD 1121/Exp-12/11, dated:27-12-2011.

By Order and in the name of the Governor of Karnataka,

**S.J.SAMPATH KUMAR**

Deputy Secretary to Government

Infrastructure Development Department

PR.482

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಧಾರವಾಡ ಜಿಲ್ಲೆಯ ಕಲಘಟಗಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಯೋಇ : 309 : ಪಿಟಿಪಿ : 94, ದಿನಾಂಕ:07–08–1995.
2. ಸರ್ಕಾರದ ಆದೇಶ ಸಂಖ್ಯೆ:ಯೋಇ : 108 : ಯೋವಿವಿ : 09, ದಿನಾಂಕ:14–12–2009.
3. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರ ಸಂಖ್ಯೆ:ರಾಕಾ/ನಾನಿ/937/2011, ದಿ:17–12–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಈಗಾಗಲೇ ಮೇಲೆ ಓದಲಾದ (2)ರಲ್ಲಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಓದಲಾದ (3) ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಶಿಫಾರಸ್ಸಿನ ಮೇರೆಗೆ ಧಾರವಾಡ ಜಿಲ್ಲೆಯ ಕಲಘಟಗಿ ತಾಲ್ಲೂಕು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 108 ಯೋವಿವಿ 2009, ಬೆಂಗಳೂರು, ದಿನಾಂಕ: 28ನೇ ಜನವರಿ 2012.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಧಾರವಾಡ ಜಿಲ್ಲೆಯ ಕಲಘಟಗಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ದಿನಾಂಕ 14–12–2009ರಲ್ಲಿನ ಆದೇಶದಲ್ಲಿ ಮಾಡಲಾದ ನಾಮನಿರ್ದೇಶನವನ್ನು ರದ್ದುಪಡಿಸಿ ಈ ಕೆಳಕಂಡ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲಾಗಿದೆ.

ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕ್.

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1. | ಶ್ರೀ ಯಲ್ಲನಗೌಡ ಎನ್.ಪಾಟೀಲ, ಸಾ:ದಾಸನೂರ, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ | ಸಾಮಾನ್ಯ |
| 2. | ಶ್ರೀ ಪರಮೇಶ್ವರ ಮುದಕಯ್ಯ ಚಿಕ್ಕಮಠ ಸಾ:ರಾಮನಾಳ, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ | ಸಾಮಾನ್ಯ |
| 3. | ಶ್ರೀ ಧನಪಾಲ, ಬ.ಭೆಟದೂರ, ಸಾ:ದುಮ್ಮವಾಡ, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ | ಅ.ಸಂ. |
| 4. | ಶ್ರೀ ಬಸವರಾಜ ಎಂ.ಬಾವಕರ, ಸಾ:ದೇವಿಕೊಪ್ಪ, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ | ಬಿ.ಸಿ.ಎಂ. |
| 5. | ಶ್ರೀ ಗದಿಗೆಪ್ಪ ಕಬನೂರು, ಸಾ:ಬಿ.ಹುಲಿಕಟ್ಟಿ, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ | ಎಸ್.ಟಿ. |
| 6. | ಶ್ರೀಮತಿ ರತ್ನವ್ವ ರಾಮು ಲಮಾಣಿ, ಸಾ:ಈಚನಹಳ್ಳಿ, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ | ಮಹಿಳೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಜಿ.ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್.483

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ವಾಟರ್ ಟ್ಯಾಂಕರ್ ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಪಾವತಿಸುವ ಬಗ್ಗೆ.

**ಓದಲಾಗಿದೆ :** ಬಿಜಾಪುರ ಜಿಲ್ಲಾಧಿಕಾರಿಗಳ ಪತ್ರ ಸಂ: ಆರ್‌ಬಿ/ಸಿಎಎಲ್/ಸಿಆರ್–8/2011–12, ದಿನಾಂಕ: 13–12–2011, 02–11–2011 ಮತ್ತು 23–11–2011.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲಾಧಿಕಾರಿಗಳು ಮೇಲೆ ಓದಲಾದ ಪತ್ರಗಳಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಬಿಜಾಪುರ ಜಿಲ್ಲೆಯ ದಸೂರ, ದಶ್ಯಾಳ, ಕೋಟ್ಯಾಳ, ಉಮರಜ, ತಗ್ಗಿಹಳ್ಳಿ, ಮತ್ತು ವೀಭೂತಿ ಗ್ರಾಮಗಳಲ್ಲಿ ಡೀಸಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆದಿದ್ದು, ಸದರಿ ಜನರೇಟರ್ ಬಾಡಿಗೆ ಬಾಬ್ತು ರೂ. 15,31,743/– ಗಳನ್ನು ಬಿಡುಗಡೆ ಮಾಡುವಂತೆ ವಿಜಾಪುರ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 400 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ 24-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ಈ ಕೆಳಗಿನಂತೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ | ಗ್ರಾಮ | ಜನರೇಟರ್ ಬಾಬ್ತು (ರೂ.ಗಳಲ್ಲಿ) |
|---|---|---|
| 1 | ದಸೂರ | 3,02,710/– |
| 2 | ದಶ್ಯಾಳ | 3,74,924/– |
| 3 | ಕೋಟ್ಯಾಳ | 1,80,000/– |
| 4 | ಉಮರಜ | 3,03,065/– |
| 5 | ತಗ್ಗಿಹಳ್ಳಿ | 94,124/– |
| 6 | ವಿಭೂತಿಹಳ್ಳಿ | 2,76,920/– |
| | ಒಟ್ಟು | 15,31,743/– |

(ರೂಪಾಯಿ ಹದಿನೈದು ಲಕ್ಷದ ಮೂವತ್ತೊಂದು ಸಾವಿರದ ಏಳುನೂರ ನಲವತ್ತಾ ಮೂರು ಮಾತ್ರ)

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235–00–111–0–02 'Public Contributions to the Calamity Relief' ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್–8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು. ಬಿಡುಗಡೆ ಮಾಡಿರುವ ಹಣವನ್ನು ಹೇಗೆ ಉಪಯೋಗಿಸಲಾಗಿದೆ. ಮತ್ತು ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಂ. ಆನಂದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 484 ಕಂದಾಯ ಇಲಾಖೆ

(ವಿ.ನಿ. & ಸೇವೆಗಳು–2)

## ಕಂದಾಯ ಸಚಿವಾಲಯ

**ವಿಷಯ :** ಕಂದಾಯ ಇಲಾಖೆ, ವಿಪತ್ತು ನಿರ್ವಹಣೆ ಕೋಶದ ವಾಹನ ಸಂ: ಕೆಎ 01 ಜಿಎ 9900 ರ ದುರಸ್ತಿ ಬಗ್ಗೆ.

**ಓದಲಾಗಿದೆ :** ಶ್ರೀ ಮೂಕಾಂಬಿಕಾ ಆಟೋ ಗ್ಯಾರೇಜ್ ಮತ್ತು ಸರ್ವೀಸ್ ಸ್ಟೇಷನ್ ಇವರ ಬಿಲ್ ಸಂ: 166 ದಿನಾಂಕ: 24–12–2011.

**ಪ್ರಸ್ತಾವನೆ :**

ಕಂದಾಯ ಇಲಾಖೆ, ವಿಪತ್ತು ನಿರ್ವಹಣೆ ಕೋಶದ ಅಧಿಕೃತ ವಾಹನ ಸಂ: 01 ಜಿಎ 9900 ದ ರಿಪ್ಲೇಸ್‌ಮೆಂಟ್ ಕೆಳಕಂಡಂತೆ ದುರಸ್ತಿ ಮಾಡಿಸಿಕೊಂಡ ಬಾಬ್ತು ರೂ. 4,590/– ಮೊಬಲಗನ್ನು ವೆಚ್ಚ ಪಾವತಿ ಮಾಡಲು ಶ್ರೀ ಮೂಕಾಂಬಿಕಾ ಆಟೋ ಗ್ಯಾರೇಜ್ ಮತ್ತು ಸರ್ವೀಸ್ ಸ್ಟೇಷನ್, ಬೆಂಗಳೂರು ಇವರು ಬಿಲ್ ಸಲ್ಲಿಸಿರುತ್ತಾರೆ.

| | | |
|---|---|---|
| 1 | Replacement Engine Oil & Oild Filters | 200–00 |
| 2 | Full Servicing & Greecing | 400–00 |
| 3 | Four Wheel Break Adjustment & Break Pad Replacement | 400–00 |
| 4 | Engine Oil | 1260–00 |
| 5 | Oil Filter | 380–00 |

| | | |
|---|---|---|
| 6 | Coolent | 240–00 |
| 7 | Gear Box Oil | 280–00 |
| 8 | Break Pad | 1430–00 |
| 9 | Labour Charges | 1000–00 |
| | Total | 4590–00 |

ಆದ್ದರಿಂದ, ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಇಟಿಸಿ 2011, ಬೆಂಗಳೂರು, ದಿನಾಂಕ 15–10–2011**

ಕಂದಾಯ ಇಲಾಖೆ, ವಿಪತ್ತು ನಿರ್ವಹಣೆ ಕೋಶದ ಅಧಿಕೃತ ವಾಹನ ಸಂ: 01 ಜಿಎ 9900 ಗೆ ಪ್ರಸ್ತಾವನೆಯಲ್ಲಿ ತಿಳಿಸಿರುವ ಸರ್ವೀಸಿಂಗ್ ಮಾಡಿಸಿದ ಬಾಬ್ತು ಒಟ್ಟು ರೂ. 4590/– (ರೂಪಾಯಿ ನಾಲ್ಕು ಸಾವಿರದ ಐದು ನೂರ ತೊಂಬತ್ತು ಮಾತ್ರ) ಗಳನ್ನು ಶ್ರೀ ಮೂಕಾಂಬಿಕಾ ಆಟೋ ಗ್ಯಾರೇಜ್ ಮತ್ತು ಸರ್ವೀಸ್ ಸ್ಟೇಷನ್ಸ್, ಬೆಂಗಳೂರು ಇವರಿಗೆ ಪಾವತಿ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2245–80–101–0–00–0–059 ಇತರೇ ಖರ್ಚು (ಯೋಜನೇತರ) ಇದರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಎಂ. ಆನಂದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ವಿ.ನಿ. & ಸೇವೆಗಳು–2)

ಪಿ.ಆರ್. 485

## ಕಂದಾಯ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ಆರ್‌ಡಿ: 38: ಎಲ್‌ಜಿಆರ್ : 2011, ಬೆಂಗಳೂರು, ದಿನಾಂಕ : 27–1–2012**

ಮೆ: ಅಲ್ಟ್ರಾಟೆಕ್ ಸಿಮೆಂಟ್ ಲಿ., ಇವರಿಗೆ ಕೊಪ್ಪಳ ತಾಲ್ಲೂಕಿನ ಗಿಣಿಗೇರಾ ಗ್ರಾಮದ ಸ.ನಂ. /181/ಎ, 181/ಬಿ, 182ಸಿ ಮತ್ತು 182 ರಲ್ಲಿಯ ಒಟ್ಟು 2–16ಎಕರೆ ಜಮೀನನ್ನು ಮಂಜೂರು ಮಾಡಿರುವ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ/8/ಎಲ್‌ಜಿಆರ್/2009, ದಿ: 23–11–2010ರ ಆದೇಶದ ಕ್ರಮ ಸಂಖ್ಯೆ: (1)ರ ಕೆಳಭಾಗದಲ್ಲಿ ಈ ಕೆಳಕಂಡ ಷರತ್ತನ್ನು ಅಳವಡಿಸಿ ಓದಿಕೊಳ್ಳತಕ್ಕದ್ದು.

1. ಆರ್.ಯು.ಬಿ. ನಿರ್ಮಿಸಿ ಜಿಲ್ಲೆಗೆ ಬರುವಂತಹ ಗಣ್ಯ ವ್ಯಕ್ತಿಗಳಿಗೆ ಯಾವುದೇ ತೊಂದರೆಯಾಗದಂತೆ ಮತ್ತು ಗಣ್ಯ ವ್ಯಕ್ತಿಗಳ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸತಕ್ಕದ್ದು.
2. ಹಾಲಿ ಇರುವಂತಹ ಹೆಲಿಪ್ಯಾಡನ್ನು ದಕ್ಷಿಣ ಭಾಗಕ್ಕೆ ಸ್ಥಳಾಂತರಿಸುವುದು.
3. ಈ ಹಿಂದೆ ಪ್ರಸ್ತಾಪಿಸಿರುವ 5.50 ಮೀಟರ್‌ನಿಂದ ರೋಡ್ ಅಂಡರ್ ಬ್ರಿಡ್ಜ್ ಅನ್ನು 11.00 ಮೀಟರ್‌ಗೆ ವಿಸ್ತರಿಸುವುದು.
4. ಈಗಾಗಲೇ ಆದೇಶದಲ್ಲಿ ಸೂಚಿಸಿರುವಂತೆ ಮಾರುಕಟ್ಟೆ ಬೆಲೆ ಪ್ರತಿ ಎಕರೆಗೆ ರೂ. 20,00,000/– ಬೆಲೆ ನಿಗಧಿಪಡಿಸತಕ್ಕದ್ದು.
5. ಮೇಲಿನ ಕಾಮಗಾರಿಗಳಿಗೆ ತಗಲುವ ವೆಚ್ಚವನ್ನು ಮೆ: ಅಲ್ಟ್ರಾಟೆಕ್ ಸಿಮೆಂಟ್ ಕಂಪನಿಯೇ ಭರಿಸತಕ್ಕದ್ದು.
6. ಮೇಲಿನ ನಿಭಂದನೆಗಳೊಂದಿಗೆ ದಿನಾಂಕ: 23–11–2010 ರಲ್ಲಿ ವಿಧಿಸಿರುವ ನಿಭಂದನೆಗಳು. ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ಭೂ ಮಂಜೂರಾತಿ–3)

ಪಿ.ಆರ್. 486

## ಒಳಾಡಳಿತ ಸಚಿವಾಲಯ

**ವಿಷಯ :** ಒಳಾಡಳಿತ ಇಲಾಖೆಗೆ ಹೊಸದಾಗಿ ಮಂಜೂರು ಮಾಡಿರುವ ಉಪ ಕಾರ್ಯದರ್ಶಿಯವರು ನಿರ್ವಹಿಸಬೇಕಾದ ವಿಷಯ/ಕಾರ್ಯಭಾರ ಹಂಚಿಕೆಯ ಕುರಿತು.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 224 ಸಅಸೇ 2011, ದಿನಾಂಕ: 02–01–2012.

**2)** ಸರ್ಕಾರದ ಆದೇಶ ಸಂಖ್ಯೆ: ಒಇ 12 ಪಿಸಿಎನ್ 2011, ದಿನಾಂಕ: 14–07–2011.

**3)** ಸರ್ಕಾರದ ಅಪರ ಕಾರ್ಯದರ್ಶಿ (ಪೊಲೀಸ್ ಸೇವೆಗಳು) ಇವರ ಟಿಪ್ಪಣಿ ಸಂಖ್ಯೆ: ಒಇ 1543/ಅಪರ ಕಾ/2012, ದಿನಾಂಕ: 12–07–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಅಧಿಸೂಚನೆ ದಿನಾಂಕ: 02–01–2012 ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಒಳಾಡಳಿತ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ, ಟಿ.ಕೃಷ್ಣಮೂರ್ತಿಯವರಿಗೆ ಉಪ ಕಾರ್ಯದರ್ಶಿ ಹುದ್ದೆಗೆ ಪದ್ನೋನತಿ ನೀಡಿ ಒಳಾಡಳಿತ ಇಲಾಖೆಯಲ್ಲಿಯೇ ಮುಂದುವರಿಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶ ದಿನಾಂಕ: 14–07–2011 ರನ್ನು ಭಾಗಶಃ ಮಾರ್ಪಡಿಸಿ ಉಪ ಕಾರ್ಯದರ್ಶಿ (ಪೊಲೀಸ್ ಸಹಾಯಕ ಸೇವೆಗಳು) ಇವರಿಗೆ ಹಂಚಿಕೆ ಮಾಡಿದ ಸೆರಮನೆ ಮತ್ತು ಸಿನಿಮಾ ಶಾಖೆಯ ಕಾರ್ಯವಿಷಯವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಜಂಟಿ ಕಾರ್ಯದರ್ಶಿ ಕಾನೂನು ಮತ್ತು ಸುವ್ಯವಸ್ಥೆಯವರಿಗೆ ಮರು ಹಂಚಿಕೆ ಮಾಡಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ (3)ರ ಟಿಪ್ಪಣಿಯಲ್ಲಿ ಪ್ರಸ್ತುತ ಉಪಕಾರ್ಯದರ್ಶಿ (ಪೊಲೀಸ್ ಸಹಾಯಕ ಸೇವೆಗಳು) ಹುದ್ದೆಯಲ್ಲಿ ಅಗ್ನಿಶಾಮಕ ಮತ್ತು ತುರ್ತು ಸೇವೆಗಳು ಇಲಾಖೆ ಸೈನಿಕ ಕಲ್ಯಾಣ ಇಲಾಖೆ ಮತ್ತು ಗೃಹರಕ್ಷಕದಳ ಮತ್ತು ಪೌರರಕ್ಷಣೆ ಇಲಾಖೆಗೆ ಸಂಬಂಧಿಸಿದ ವಿಷಯಗಳನ್ನು ನಿರ್ವಹಿಸಲಾಗುತ್ತಿದ್ದು ಈ ವಿಷಯಗಳ ಜೊತೆಗೆ ಒಳಾಡಳಿತ ಇಲಾಖೆಗೆ ಸಂಬಂಧಿಸಿದ ಸ್ವೀಕೃತಿ ಮತ್ತು ರವಾನೆ ಶಾಖೆ ಮತ್ತು ಸಮನ್ವಯ ಶಾಖೆಯ ವಿಷಯಗಳನ್ನು ಸಹ ನಿರ್ವಹಿಸುವಂತೆ ಉಪ ಕಾರ್ಯದರ್ಶಿ (ಪೊಲೀಸ್ ಸಹಾಯಕ ಸೇವೆಗಳು) ಇವರಿಗೆ ಸೂಚಿಸಬಹುದೆಂದು ಸರ್ಕಾರದ ಅಪರ ಕಾರ್ಯದರ್ಶಿ (ಪೊಲೀಸ್ ಸೇವೆಗಳು) ಇವರು ತಿಳಿಸಿರುತ್ತಾರೆ.

ಸದರಿ ಟಿಪ್ಪಣಿಯನ್ನು ಪರಿಶೀಲಿಸಿ ಅದರಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 12 ಪಿಸಿಎನ್ 2011,, ಬೆಂಗಳೂರು, ದಿನಾಂಕ 30–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಒಇ 12 ಪಿಸಿಎನ್ 2011, ದಿನಾಂಕ: 14–07–2011 ಅನ್ನು ಭಾಗಶಃ ಮಾರ್ಪಡಿಸಿ ಒಳಾಡಳಿತ ಇಲಾಖೆಯ ಸರ್ಕಾರದ ಉಪ ಕಾರ್ಯದರ್ಶಿ (ಪೊಲೀಸ್ ಸಹಾಯಕ ಸೇವೆಗಳು) ಇವರು ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಇಲಾಖೆ ಸೈನಿಕ ಕಲ್ಯಾಣ ಇಲಾಖೆ ಮತ್ತು ಗೃಹರಕ್ಷಕದಳ ಮತ್ತು ಪೌರರಕ್ಷಣೆ ಇಲಾಖೆಗೆ ಸಂಬಂಧಿಸಿದ ವಿಷಯಗಳನ್ನು ನಿರ್ವಹಿಸುತ್ತಿದ್ದು ಈ ವಿಷಯಗಳ ಜೊತೆಗೆ ಒಳಾಡಳಿತ ಇಲಾಖೆಗೆ ಸಂಬಂಧಿಸಿದ ಸ್ವೀಕೃತಿ ಮತ್ತು ರವಾನೆ ಶಾಖೆ ಮತ್ತು ಸಮನ್ವಯ ಶಾಖೆಯ ವಿಷಯಗಳನ್ನು ಸಹ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇವರಿಗೆ ಮರು ಹಂಚಿಕೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಈ ಪಾಪಣ್ಣ

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 487 ಒಳಾಡಳಿತ ಇಲಾಖೆ

(ಸಮನ್ವಯ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕೊಳ್ಳೇಗಾಲ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 7290.00 ಲಕ್ಷಗಳಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ವ್ಯ.ನಿ. ಕನನೀಸಒಚಮಂಡಳಿರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ ಕೊಳ್ಳೇಗಾಲ–ಒಚ.ಯೋ01/1050/2010–11 ದಿ: 07–07–2010.

**ಪ್ರಸ್ತಾವನೆ :**

ಕೊಳ್ಳೇಗಾಲ ಪಟ್ಟಣವು ಚಾಮರಾಜನಗರ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯ ಪ್ರಕಾರ. 52,607 ಇದ್ದು, ಪ್ರಸ್ತುತ ಸುಮಾರು 60,000 ಜನಸಂಖ್ಯೆ ಇರುತ್ತದೆ. ಕೊಳ್ಳೇಗಾಲ ಪಟ್ಟಣಕ್ಕೆ ಕಾವೇರಿ ನದಿಯಿಂದ 1970ರಲ್ಲಿ ಕರ್ಯಗತಗೊಳಿಸಲಾದ 1.0 ಎಂ.ಜಿ.ಡಿ. ಕುಡಿಯುವ ನೀರು ಸರಬರಾಜು ಯೋಜನೆಯಿಂದ ಹಾಗೂ 2006ರಲ್ಲಿ ಕಾರ್ಯಗತಗೊಳಿಸಲಾದ 13.50 ಎಂ.ಎಲ್.ಡಿ., ಕುಡಿಯುವ ನೀರು ಸರಬರಾಜು ಯೋಜನೆಯಿಂದ ತಲಾ ದಿನಂಪ್ರತಿ 100 ಲೀ.ನಂತೆ ನೀರು ಸರಬರಾಜು ಮಾಡಲಾಗುತ್ತಿದೆ.

ಕೊಳ್ಳೇಗಾಲ ಪಟ್ಟಣದ ಕೆಲವು ಭಾಗಗಳಲ್ಲಿ ಒಳಚರಂಡಿ ವ್ಯವಸ್ಥೆ ಇದ್ದು (21.425 ಕಿ.ಮೀ. ಉದ್ದದ ಒಳಚರಂಡಿ ಕೊಳವೆ ಮಾರ್ಗ) ಪಟ್ಟಣದ ನೈರ್ಮಲ್ಯತೆಯನ್ನು ಕಾಪಾಡುವ ದೃಷ್ಟಿಯಿಂದ ಪಟ್ಟಣದ ಎಲ್ಲಾ ಭಾಗಗಳಿಗೂ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಯೋಜನೆಯನ್ನು ರೂಪಿಸಲಾಗಿದೆ. ಪ್ರಸ್ತುತ ಒಳಚರಂಡಿ ಯೋಜನೆಯನ್ನು 2027ರಲ್ಲಿ ಅಂದಾಜಿಸಲಾದ ಮಧ್ಯಂತರ ಅವಧಿಯ 80,078ಕ್ಕೆ ಜನಸಂಖ್ಯೆಗೆ ಮತ್ತು 2042ರಲ್ಲಿ ಅಂದಾಜಿಸಲಾದ ಅಂತಿಮ ಅವಧಿಯ 1,02,203 ಜನಸಂಖ್ಯೆ ಎಂದು ಪರಿಗಣಿಸಿ ದಿನಂಪ್ರತಿ ತಲಾ 110 ಲೀ ತ್ಯಾಜ್ಯ ನೀರನ್ನು ಅಂದಾಜಿಸಿ ಯೋಜನೆ ವಿನ್ಯಾಸಿಸಲಾಗಿದೆ.

ಪಟ್ಟಣವನ್ನು 4 ವಲಯಗಳನ್ನಾಗಿ ವಿಂಗಡಿಸಿ ಆಂತರಿಕ ಕೊಳವೆ ಮಾರ್ಗಗಳಿಗೆ ಸ್ಟೋನ್‌ವೇರ್ ಕೊಳವೆಗಳು ಆರ್.ಸಿ.ಸಿ. ಕೊಳವೆಗಳು ಹಾಗೂ ಯು.ಪಿ.ವಿ.ಸಿ. (SDR) ಕೊಳವೆಗಳನ್ನು ಅಳವಡಿಸಲು ಹಾಗೂ ಇಟ್ಟಿಗೆ ಹಾಗೂ ಆರ್.ಸಿ.ಸಿ. ಅಳುಗುಂಡಿಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ. ವಿನ್ಯಾಸದ ಪ್ರಕಾರ ವೆಟ್‌ವೆಲ್‌ಗಳನ್ನು ನಿರ್ಮಿಸಲು ಹಾಗೂ 4.5 ಎಂ.ಎಲ್.ಡಿ. ಸಾಮರ್ಥ್ಯದ SBR technology ಅಳವಡಿಸಿಕೊಂಡು ಮಲಿನ ನೀರು ಶುದ್ಧೀಕರಣ ಘಟಕವನ್ನು ನಿರ್ಮಿಸಲು ಉದ್ದೇಶಿಸಿದೆ.

ಮೇಲ್ಕಂಡ ಅಂದಾಜನ್ನು 2009–10ನೇ ಸಾಲಿನ ಮಂಡಳಿ ಹಾಗು ಮೈಸೂರು ವೃತ್ತದ ಲೋಕೋಪಯೋಗಿ ಬಂದರು ಹಾಗೂ ಒಳನಾಡು ಸಾರಿಗೆ ಇಲಾಖೆಯ ದರಪಟ್ಟಿಯನ್ವಯ ರೂ. 7290.00 ಲಕ್ಷಗಳಿಗೆ ಅಂದಾಜಿಸಿ ವ್ಯವಸ್ಥಾಪಕ ನಿರ್ದೇಶಕರು ಕನನೀಸ ಮತ್ತು ಒಚ ಮಂಡಳಿಯವರು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ ಶೇ. 50 | ರೂ. 3645.00 ಲಕ್ಷಗಳು |
| ಸರ್ಕಾರದ ಸಾಲ ಶೇ. 25 | ರೂ. 1822.50 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಗೆ ಶೇ. 25 | ರೂ. 1822.50 ಲಕ್ಷಗಳು |
| ಒಟ್ಟು | ರೂ. 7290.00 ಲಕ್ಷಗಳು |

ಆದರೆ, ಪ್ರಸ್ತುತ ಸರ್ಕಾರವು ಹಾಲಿ ಜಾರಿಯಲ್ಲಿರುವ ಒಳಚರಂಡಿ ಯೋಜನೆಗಳ ಆರ್ಥಿಕ ಮಾದರಿಯು ಸರ್ಕಾರದ ಸಾಲದಿಂದ ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲ ಹಾಗೂ ಸ್ಥಳೀಯ ಸಂಸ್ಥೆಗಳ ವಂತಿಕೆಯಿಂದ ಯೋಜನೆಯ ಅಂದಾಜನ್ನು ಭರಿಸಲಾಗುತ್ತಿದ್ದು, ಸದರಿ ಸ್ಥಳೀಯ ಸಂಸ್ಥೆಗಳಲ್ಲಿನ ನಾಗರೀಕರ ಹಿತದೃಷ್ಟಿಯಿಂದ, ಪರಿಸರ ಸಂರಕ್ಷಣೆ ಹಿತದಲ್ಲಿ ಮತ್ತು ಮಲಿನ ನೀರು ನದಿಗಳನ್ನು /ಅಂತರ್ಜಲ ನೀರನ್ನು

ಕಲುಷಿತಗೊಳಿಸದಿರುವ ದೃಷ್ಟಿಯಿಂದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಯೋಜನೆಗಳನ್ನು ಕಲ್ಪಿಸುವ ದೃಷ್ಟಿಯಿಂದ ಮತ್ತು ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಸಬಲವಿಲ್ಲದ ಕಾರಣ ಈ ಯೋಜನೆಗಳ ಪ್ರಯೋಜನವನ್ನು ಪಡೆಯುವುದರಿಂದ ವಂಚಿತರಾಗುವುದನ್ನು ತಡೆಯಲು ಒಳಚರಂಡಿ ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 07 ಯುಡಬ್ಲ್ಯೂಎಸ್ 2011, ದಿ: 20-07-2011 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ, ಆದೇಶಿಸಿರುತ್ತದೆ. ಸದರಿ ಆದೇಶದನ್ವಯ ಕೊಳ್ಳೇಗಾಲ ನಗರ ಸಭೆಯಾಗಿದ್ದು, ಈ ಯೋಜನೆಯ ಆರ್ಥಿಕ ಮಾದರಿಯನ್ನು ಈ ಕೆಳಕಂಡಂತೆ ನಿಗದಿಗೊಳಿಸಬೇಕಾಗಿರುತ್ತದೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (70%) | ರೂ. 5103.00 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (20%) | ರೂ. 1458.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ (10%) | ರೂ. 729.00 ಲಕ್ಷಗಳು |
| ಒಟ್ಟು | ರೂ. 7290.00 ಲಕ್ಷಗಳು |

ಈ ಯೋಜನೆಯನ್ನು 2011-12ನೇ ಸಾಲಿನ ಅನುಮೋದಿತ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ಸೇರಿಸಿ ಪ್ರಸ್ತುತ ಸಾಲಿನಲ್ಲಿ ರೂ. 2430.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಸರ್ಕಾರವು ಯೋಜನೆಯ ಅಂದಾಜಿನಲ್ಲಿ ವಿಧಿಸಲಾಗುತ್ತಿರುವ ಇಟಿಪಿ, ದರಗಳನ್ನು ಶೇಕಡ 10 ಕ್ಕೆ ಮಿತಿಗೊಳಿಸಲು ನಿರ್ಧರಿಸುವ ಹಿನ್ನೆಲೆಯಲ್ಲಿ ಹಾಗೂ ಯೋಜನೆಯಡಿ ಉದ್ಭವಿಸಬಹುದಾದ ಟೆಂಡರ್ ಪ್ರೀಮಿಯಮ್ ಮತ್ತು ಎಸ್ಕಲೇಶನ್ ದರಗಳನ್ನು ಸ್ಥಳೀಯ ಸಂಸ್ಥೆಯೇ ಬರಿಸಬೇಕಾಗಿರುವುದರಿಂದ ಸದರಿ ಮೊತ್ತಗಳನ್ನು ಅಂದಾಜು ಪಟ್ಟಿಯಿಂದ ಹೊರತುಪಡಿಸಲು ತೀರ್ಮಾನಿಸಿದೆ. ಅದರಂತೆ ಯೋಜನೆಯ ಅಂದಾಜು ವೆಚ್ಚದಲ್ಲಿ ಮೂಲ ಅಂದಾಜು ಮೊತ್ತವಾದ ರೂ. 5469.44 ಲಕ್ಷಗಳಿಗೆ ಶೇಕಡ 10 ರಷ್ಟು ಇಟಿಪಿ ದರಗಳನ್ನು ಅಂದರೆ ರೂ. 546.94 ಲಕ್ಷಗಳು ಮತ್ತು ಇತರೆ ವೆಚ್ಚಗಳಾದ ರೂ. 0.62 ಲಕ್ಷಗಳನ್ನು ಸೇರಿಸಿ ಯೋಜನೆಯ ಅಂದಾಜು ಮೊತ್ತವನ್ನು ರೂ. 6017.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿದೆ.

ಸರ್ಕಾರವು ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 05 ಯುಡಿಎಸ್ 2010, ಬೆಂಗಳೂರು, ದಿನಾಂಕ 24-01-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಳ್ಳೇಗಾಲ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 6017.00 ಲಕ್ಷಗಳಲ್ಲಿ (ರೂ. ಆರು ಸಾವಿರದ ಹದಿನೇಳು ಲಕ್ಷಗಳು ಮಾತ್ರ) ಕಲ್ಪಿಸುವ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned ULB. The estimate is reduced to such extent.
2) ETP/Contingencies are limited to 10 % of the project cost.
3) The board shall invite the tender immediately after the handing over of the land required under the scheme in order to avoid time and cost run over.
4) The consent of the ULB shall be obtained to meet the extra cost that might occur due to deviations, extra item works or variations in the Scheme.
5) Adequate provisions to be made by the Board in the following Years for timely completion of the Project.
6) Water rates as proposed by KUWS&DB have to be implemented to meet O & M cost of UGD.
7) KTPP provisions, quality control and timely completion should be ensured.
8) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 665 Exp-9:2010 ದಿನಾಂಕ: 05-10-2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಟಿ.ಎಂ. ವಾಸುದೇವರಾವ್
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 488

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸರ್ಕಾರದ ನಿರ್ಣಯಗಳನ್ನು ಜಾರಿಗೊಳಿಸುವ ಸಲುವಾಗಿ ಸರ್ಕಾರಿ ಆದೇಶ ಇತ್ಯಾದಿಗಳನ್ನು ಆನ್‌ಲೈನ್ ಮೂಲಕ ತಯಾರಿಸುವುದು, ಅನುಮೋದಿಸುವುದು, ದೃಢೀಕರಿಸುವುದು ಮತ್ತು ಹೊರಡಿಸುವ ಕುರಿತು ಸಮರ್ಪಕವಾಗಿ ಕಾರ್ಯಗತಗೊಳಿಸಲು ಬಳಕೆದಾರರ ಅಂಗೀಕಾರ ಸಮಿತಿ (User Acceptance Committee) ಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** 1) ದಿನಾಂಕ 29-08-2011 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 90 ಇಆಇ 2009 (ಭಾಗ-1)
2) ದಿನಾಂಕ 18-10-2011 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 90 ಇಆಇ 2009 (ಭಾಗ-1)

**ಪ್ರಸ್ತಾವನೆ :**

1. ಸರ್ಕಾರ ತೆಗೆದುಕೊಂಡ ನಿರ್ಣಯಗಳನ್ನು ಜಾರಿಗೊಳಿಸುವ ಸಲುವಾಗಿ, ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳು ಹೊರಡಿಸುವ ಆದೇಶ ಇತ್ಯಾದಿಗಳನ್ನು ಆನ್‌ಲೈನ್ ಮೂಲಕ ಕೇಂದ್ರಿಕೃತವಾಗಿ ಒಂದೇ ಸ್ಥಳದಲ್ಲಿ ಲಭ್ಯಗೊಳಿಸಲು ಉದ್ದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ

ಸರ್ಕಾರದ ನಿರ್ಣಯಗಳನ್ನು ಸಂಬಂಧಿಸಿದವರಿಗೆ ತಿಳಿಸುವ ಹಾಗೂ ಅವುಗಳನ್ನು ಜಾರಿಗೊಳಿಸುವ ಸಲುವಾಗಿ ಸರ್ಕಾರಿ ಆದೇಶ, ಸುತ್ತೋಲೆ, ಅಧಿಕೃತ ಜ್ಞಾಪನ, ಅಧಿಸೂಚನೆ ಇತ್ಯಾದಿಗಳನ್ನು ಡಿಜಿಟಲ್ (ಆನ್‌ಲೈನ್) ರೂಪದಲ್ಲಿ ತಯಾರಿಸುವ, ಅನುಮೋದಿಸುವ, ದೃಢೀಕರಿಸುವ ಹಾಗೂ ಅವುಗಳನ್ನು ದೃಢೀಕರಿಸಲು ಅಧಿಕಾರ ಹೊಂದಿದ ಅಧಿಕಾರಿ/ಸಿಬ್ಬಂದಿಯ ಡಿಜಿಟಲ್ ಸಹಿಯ ಮೇರೆಗೆ ವೆಬ್‌ಸೈಟ್‌ನಲ್ಲಿ ಹಾಕುವ ಮೂಲಕ ಹೊರಡಿಸುವ ವಾಡಿಕೆಯನ್ನು ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಜಾರಿಗೆ ತರುವ ಬಗ್ಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 29–08–2011ರ ಆದೇಶದನ್ವಯ ಸೂಚನೆಗಳನ್ನು ನೀಡಲಾಗಿದೆ. ದಿನಾಂಕ: 29–08–2011ರ ಆದೇಶದಲ್ಲಿನ ಸೂಚನೆಗಳನ್ನು ಜಾರಿಗೊಳಿಸುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 18–10–2011ರ ಆದೇಶದಲ್ಲಿ ಇ–ಆಡಳಿತ ಕೇಂದ್ರ, ಬೆಂಗಳೂರು ಅನ್ನು ಜಾರಿಗೊಳಿಸುವ ಸಂಸ್ಥೆ (implementing agency) ಯನ್ನಾಗಿ ನೇಮಿಸಲಾಗಿದೆ.

2. ಮೇಲ್ಕಂಡ ಸೂಚನೆಗಳನ್ನು ಜಾರಿಗೊಳಿಸುವ ಸಲುವಾಗಿ ತಂತ್ರಾಂಶವನ್ನು ಅಭಿವೃದ್ಧಿಗೊಳಿಸುವ ಕಾರ್ಯವನ್ನು ಎನ್.ಐ.ಸಿ.ಗೆ ವಹಿಸಲಾಗಿದೆ. ನ್ಯಾಷನಲ್ ಇನ್‌ಫರ್‌ಮ್ಯಾಟಿಕ್ಸ್ ಸೆಂಟರ್ (ಎನ್‌ಐಸಿ) ಯು ಅಭಿವೃದ್ಧಿಗೊಳಿಸುವ ತಂತ್ರಾಂಶವು ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ಕಾರ್ಯನಿರ್ವಹಣೆಗೆ ಅನುಗುಣವಾಗಿದೆಯೇ ಎಂಬ ಬಗ್ಗೆ ಪರಿಶೀಲಿಸಬೇಕಾಗಿರುತ್ತದೆ. ಈ ಕಾರ್ಯವನ್ನು ನಿರ್ವಹಿಸಲು (To validate the workflow and provide inputs for customization of software) ಬಳಕೆದಾರರ ಅಂಗೀಕಾರ ಸಮಿತಿ (User Acceptance Committee) ಯನ್ನು ರಚಿಸುವ ಅಗತ್ಯವಿರುತ್ತದೆ. ಅದರಂತೆ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 9 ಇಆಇ 2012, ಬೆಂಗಳೂರು, ದಿನಾಂಕ 25–01–2012**

3. ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಬಳಕೆದಾರರ ಅಂಗೀಕಾರ ಸಮಿತಿ (User Acceptance Committee) ಯನ್ನು ಸರ್ಕಾರ ಈ ಮೂಲಕ ರಚಿಸಿದೆ.

| | | | |
|---|---|---|---|
| (1) | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ | – | ಅಧ್ಯಕ್ಷರು |
| (2) | ನಿರ್ದೇಶಕರು, ವಿದ್ಯುನ್ಮಾನ ನಾಗರೀಕ ಸೇವಾ ವಿತರಣಾ ನಿರ್ದೇಶನಾಲಯ | – | ಸದಸ್ಯರು |
| (3) | ಸರ್ಕಾರದ ಅಪರ ಕಾರ್ಯದರ್ಶಿ, ಸಿಆಸುಇ (ಇ–ಆಡಳಿತ) | – | ಸದಸ್ಯರು |
| (4) | ಸಮನ್ವಯ/ನೋಡಲ್ (ಒ ಅಂಡ್ ಎಮ್) ಅಧಿಕಾರಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) | – | ಸದಸ್ಯರು |
| (5) | ಸಮನ್ವಯ /ನೋಡಲ್ (ಒ ಅಂಡ್ ಎಮ್) ಅಧಿಕಾರಿ, ಕಂದಾಯ ಇಲಾಖೆ | – | ಸದಸ್ಯರು |
| (6) | ಸಮನ್ವಯ /ನೋಡಲ್ (ಒ ಅಂಡ್ ಎಮ್) ಅಧಿಕಾರಿ, ಆರ್ಥಿಕ ಇಲಾಖೆ | – | ಸದಸ್ಯರು |
| (7) | ಸಮನ್ವಯ /ನೋಡಲ್ (ಒ ಅಂಡ್ ಎಮ್) ಅಧಿಕಾರಿ, ನಗರಾಭಿವೃದ್ಧಿ ಇಲಾಖೆ | – | ಸದಸ್ಯರು |
| (8) | ಸಮನ್ವಯ /ನೋಡಲ್ (ಒ ಅಂಡ್ ಎಮ್) ಅಧಿಕಾರಿ, ಸಿಆಸುಇ ಇಲಾಖೆ (ಸೇವಾ ನಿಯಮಗಳು) | – | ಸದಸ್ಯರು |
| (9) | ಸಮನ್ವಯ /ನೋಡಲ್ (ಒ ಅಂಡ್ ಎಮ್) ಅಧಿಕಾರಿ, ಇಂಧನ ಇಲಾಖೆ | – | ಸದಸ್ಯರು |
| (10) | ತಾಂತ್ರಿಕ ನಿರ್ದೇಶಕರು, ನ್ಯಾಷನಲ್ ಇನ್‌ಫರ್‌ಮ್ಯಾಟಿಕ್ಸ್ ಸೆಂಟರ್ (ಎನ್‌ಐಸಿ) | – | ಸದಸ್ಯರು |
| (11) | ಯೋಜನಾಧಿಕಾರಿ, ಸೆಕ್ ಲ್ಯಾನ್, ಇ–ಆಡಳಿತ ಕೇಂದ್ರ | – | ಸದಸ್ಯ ಕಾರ್ಯದರ್ಶಿ |
| (12) | ಶ್ರೀ ವೆಂಕಟೇಶ್ ಪ್ರಸಾದ್, ಹಿರಿಯ ಸಮಾಲೋಚಕರು ಎಸ್.ಇಎಮ್.ಟಿ. | – | ಸದಸ್ಯರು |

4. ಕಂಡಿಕೆ 2ರಲ್ಲಿ ಉಲ್ಲೇಖಿಸಿದ ಕಾರ್ಯವನ್ನು ಸದರಿ ಸಮಿತಿಯು ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಜಿ.ಬಿ.ಬ್ರಹ್ಮ ಪ್ರಸಾದ್
**ಪೀಠಾಧಿಕಾರಿ–1**
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಇ–ಆಡಳಿತ)

ಪಿ.ಆರ್. 489

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಸಿದ್ದಯ್ಯ, ಐ.ಎ.ಎಸ್. ಇವರ ಕಡ್ಡಾಯ ನಿರೀಕ್ಷಣಾ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 603 ಎಸ್‌ಎಎಸ್ 2011., ದಿನಾಂಕ: 28–11–2011.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 660 ಎಸ್‌ಎಎಸ್ 2011., ದಿನಾಂಕ: 31–12–2011.
3) ಶ್ರೀ ಸಿದ್ದಯ್ಯ ಐ.ಎ.ಎಸ್. ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ED 12 Prl Secy 2012. ದಿನಾಂಕ: 13–01–2012.

**ಪ್ರಸ್ತಾವನೆ :**

ಮೇಲೆ ಕ್ರ ಸಂ. (1)ರಲ್ಲಿ ಓದಲಾದ ದಿನಾಂಕ: 28–11–2011ರ ಅಧಿಸೂಚನೆಯಲ್ಲಿ ಶ್ರೀ ಸಿದ್ದಯ್ಯ ಐ.ಎ.ಎಸ್. ಇವರನ್ನು ಆಯುಕ್ತರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಹುದ್ದೆಯಿಂದ ವರ್ಗಾಯಿಸಿ ಆದೇಶಿಸಿದ್ದರ ಮೇರೆಗೆ ಸದರಿಯವರು ದಿನಾಂಕ: 28–11–2011ರ ಅಪರಾಹ್ನ ಸದರಿ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಟ್ಟು, ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ತದನಂತರ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 31–12–2011ರ ಅಧಿಸೂಚನೆಯಲ್ಲಿ ಶ್ರೀಯುತರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ಹುದ್ದೆಗೆ ನೇಮಿಸಿದ್ದು, ಅದರಂತೆ ಸದರಿಯವರು ದಿನಾಂಕ: 02–01–2012ರ ಪೂರ್ವಾಹ್ನ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಉನ್ನತ ಶಿಕ್ಷಣ) ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಸಿದ್ದಯ್ಯ, ಐ.ಎ.ಎಸ್. ಇವರು ತಾವು

ದಿನಾಂಕ: 29-11-2011ರಿಂದ 01-01-2012ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ನಿಟ್ಟಿನಲ್ಲಿ ಸೂಕ್ತ ಆದೇಶ ಹೊರಡಿಸಲು ಕೋರಿದ್ದಾರೆ.

ಸರ್ಕಾರವು ಪ್ರಕರಣವನ್ನು ಪರಿಶೀಲಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಎಸ್ಐಎಸ್ 2012, ಬೆಂಗಳೂರು, ದಿನಾಂಕ 30-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿದ್ದಯ್ಯ ಐ.ಎ.ಎಸ್. ಇವರು ದಿನಾಂಕ: 29-11-2011ರಿಂದ 01-01-2012ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸರ್ಕಾರವು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15) (ಎಫ್)ರ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಸಕ್ರಮಗೊಳಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/1/ಟಿಎಫ್‌ಪಿ/96, ದಿನಾಂಕ: 10-07-96ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಯು.ಹೆಚ್. ನಾರಾಯಣಸ್ವಾಮಿ
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-1)

ಪಿ.ಆರ್. 490

## FOREST, ECOLOGY AND ENVIRONMENT SECRETARIAT

**Sub :** Diversion of 0.1316 ha. of forest land for improvement of road from haveri to hanagal (Link 78) at Sangura village, SH 2 & 1 in Haveri District in favour of the Executive Engineer, Karnataka State Highway Improvement Project Division, Belgaum.

**Read :**
1. Letter No. A5 (3) GFL.CR. 10/09-10, dated : 15/09/2010 of the Principal Chief Conservator of Forest, Bangalore.
2. State Government letter No. FEE 143 FLL 2010, dated : 18-11-2010.
3. Letter No. 4-KRB 757/2010-BAN/8526, dated : 24$^{th}$ January 2011 of Government of India, Ministry of Environment and Forests, Regional Office, Bangalore.
4. letter No. A5 (3) GFL.CR. 10/09-10, dated : 27-07-2011 of the Principal Chief Conservator of Forest, Bangalore.
5. State Government letter No. FEE 143 FLL 2010, dated : 03-10-2011.
6. Letter No. 4-KRB 757/2010-BAN/372, dated 3$^{rd}$ January 2012 of Government of India, Ministry of Environment and Forests, Regional Office, Bangalore.

**Preamble:**

The Principal Chief Conservator of forests, Bangalore vide letter dated 15-09-2010 read at (1) above had submitted a proposal to obtain the approval of Government of India under Section 2 of the forest (Conservation) Act, 1980 for diversion of 0.1316 ha. of forest land at Sangura Village, SH 2 & 1 in Haveri district for improvement of road from Haveri to Hanagal (Link 78) in favour of Executive Engineer, Karnataka State Highway Improvement Project (KSHIP) Division, Belgaum, subject to certain conditions.

2. Accordingly, the proposal was recommended to Government of India for approval vide State Government letter dated 18-11-2010 read at (2) above.

3. The Government of India Ministry of Environment and Forests, Bangalore agreed to the proposal in principle (Stage-I) under Section 2 of the forest (Conservation) Act, 1980 vide their letter dated : 24$^{th}$ January 2011 read at (3) above, subject to fulfillment of certain conditions.

4. The Principal Chief Conservator of Forests submitted the compliance report vide his letter dated 27-07-2011 read at (4) above and the same has been sent to Government of India vide State Government letter dated : 03-10-2011 read at (5) above.

5. The Government of India, Ministry of Environment and Forests, Bangalore vide their letter dated 3$^{rd}$ January 2012 read at (6) above has conveyed their approval (Stage-II) under Section 2 of the Forest (Conservation) Act, 1980 for diversion of 0.1316 ha. of forest land at Sangura Village, SH 2 & 1 in Haveri District for improvement of road from haveri to Hanagal (Link 78) in favour of Executve Engineer, Karnataka State Highway Improvement Project (KSHIP) division, Belgaum, subject to certain conditions.

The proposal has been examined in detail and hence the order.

**Government Order No. FEE 143 FLL 2010, Bangalore, Dated: 30$^{th}$ January 2012.**

In the circumstances explained above in the preamble, the Government is pleased to accord sanction under Section 2 of the Forest (Conservation) Act, 1980 for diversion of 0.1316 ha. of forest land at Sangura Village, SH 2 & 1 in Haveri district for improvement of road from Haveri to Hanagal (Link 78) in favour of Executive Engineer, Karnataka State Highway Improvement Project (KSHIP) Division, Belgaum, subject to the following conditions :

1. The legal status of the forest land shall remain unchanged and it shall continue to be as forest land.

2. Demarcation of the proposed forest area shall be carried out by erecting permanent RCC boundary pillars duly numbered at an interval of 20 mts. At the cost of user agency.
3. Compensatory afforestation shall be raised over double the extent of degraded forest land (0.2632 ha.) at the cost of user agency.
4. The additional amount of the Net Present Value (NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to either in SB A/c No. SB01025213-CAF Karnataka, Corporation Bank, CGO Complex, Lodhi road, New Delhi-110003 (RTGS/IFSC No. CORP0000371) or in SB A/c No. 344902010105 421-KARNATAKA CAMPA, Union Bank of India, sundar Nagar, New Delhi-110003 (RTGS/IFSC No. UBINo534498).
5. The total forest area utilized for the project shall not exceed 0.1316 ha. In case the land is not taken over by the user agency or the same is not used for the stipulated purpose within a period of two years, then the area shall be taken back by the forest Department.
6. The lessee shall pay lease rent as fixed by the government from time to time.
7. The lease tenure is for a ;period of 20 years.
8. The leased out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose, the area shold be resumed to the forest department under Section 82 of Karnataka forest Act, 1963. The concerned Deputy Conservator of forests is authorized to take necessary action in this regard. No residential building shall be permitted in the proposed area.
9. Karnataka forest Act 1963 and Rules 1969 and other relevant Acts & rules will be applicable for any violation.
10. The user agency shall pay the cost of raising compensatory afforestation rate prevailing at the time of sanction. (at present it is Rs. 1,05,000.00 per ha.).
11. The User Agency shall pay the Net Present Value (NPV) of forest land diverted under this proposal as per Oders dated 28-3-2008 and 9-5-2008 of the Hon'ble supreme Court of India.
12. The User Agency shall ensure that there should be no damage to the available fauna and other flora.
13. The User Agency should pay cost of soil erosion controlling structures to be carried out within the forest area all along the road.
14. The shoulder drains should be suitably covered with stone pitching in order to control soil erosion.
15. No crushing/breaking of stone shall be allowed inside forest area. Readymade material shall be used for up gradation of such roads.
16. Both sides of the upgraded road shall be reinforced with brick/stone works and vegetative measures to check soil erosion, at the project cost in consultation with the deputy Conservator of forests.
17. Plantation activities, if the concerned deputy Conservator of Forests find sit necessary, shall be taken up along the road at the project cost. The plantation shall be maintained at the project cost. The plantation shall be maintained at the project cost.
18. No labour camp shall be established on the forest lands.
19. No work shall be allowed after sunset.
20. Any damage to forest area due to such up-gradation works shall be compensated by the Implementing Agency. The extent of damage shall be assessed by the concerned deputy Conservator of forests.
21. The User agency shall not sub-lease, mortgage and hypothecate the forest srea.
22. The approval under the forest (Conservation) Act, 1980 is subject to the clearance under the environment (Protection) Act, 1986, if required.
23. The user Agency shall abide by all the conditions imposed upon by the Government of India, the Government of Karnataka and the principal chief conservator of Forests (HOFF).
24. Any other conditions that the Additional Principal Chief Conservator of forest (Central) Regional Office, Bangalore may impose from time to time for protection, improvement of flora and fauna in the forest area and public convenience, shallalso be applicable..

By Order and in the name of the Governor of Karnataka,

**G.H. Anasuyamma**

Under Secretary to Government

Forest, Ecology and Environement Department

PR.491

## ಮೂಲ ಸೌಲಭ್ಯ ಅಭಿವೃದ್ಧಿ ಸಚಿವಾಲಯ

ವಿಷಯ : ಗುಲ್ಬರ್ಗಾ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

ಓದಲಾಗಿದೆ : 1) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 24 ರಾಅವಿ 2000, ದಿನಾಂಕ : 02–01–2003.
2) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 24 ರಾಅವಿ 2000, ದಿನಾಂಕ : 30–06–2004.
3) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 24 ರಾಅವಿ 2000, ದಿನಾಂಕ : 18–08–2007.
4) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 14 ರಾಅವಿ 2007, ದಿನಾಂಕ : 15–11–2007.
5) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 72 ರಾಅವಿ 2008, ದಿನಾಂಕ : 20–06–2008
6) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 72 ರಾಅವಿ 2008, ದಿನಾಂಕ : 06–09–2008.
7) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 72 ರಾಅವಿ 2008, ದಿನಾಂಕ : 18–01–2010.
8) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 79 ರಾಅವಿ 2009, ದಿನಾಂಕ : 05–03–2011.
9) ಸರ್ಕಾರಿ ಆದೇಶ ಸಂಖ್ಯೆ : ಮೂಅಇ 34 ರಾಅವಿ 2011, ದಿನಾಂಕ : 17–03–2011.
10) ಜಿಲ್ಲಾಧಿಕಾರಿಗಳು, ಗುಲ್ಬರ್ಗಾ, ಇವರ ಪತ್ರ ಸಂ./ಕಂ/ಭೂಸ್ವಾ/429/2008–09 ದಿನಾಂಕ : 24–11–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶ ದಿನಾಂಕ : 02–01–2003 ರಲ್ಲಿ ಗುಲ್ಬರ್ಗಾ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಶ್ರೀನಿವಾಸ ಸಾರಡಗಿ ಗ್ರಾಮದಲ್ಲಿ 567 ಎಕರೆ ಭೂ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳಲು ಗುಲ್ಬರ್ಗಾ ಜಿಲ್ಲಾಧಿಕಾರಿಗಳಿಗೆ ಅನುಮೋದನೆ ನೀಡಲಾಗಿದೆ.

2. ಮೆಲೆ ಕ್ರಮ ಸಂಖ್ಯೆ (2) ರಿಂದ (8) ರಲ್ಲಿ ಓದಲಾದ ಆದೇಶಗಳಲ್ಲಿ ಭೂಸ್ವಾಧೀನ ಹಾಗೂ ತಾಂಡಾ ಸ್ಥಳಾಂತರಕ್ಕೆ ಅಗತ್ಯವಾದ ಮೊತ್ತವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಇವರಿಗೆ ಬಿಡುಗಡೆ ಮಾಡಲಾಗಿರುತ್ತದೆ.

3. ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ಆದೇಶದ ದಿನಾಂಕ : 17–03–2011 ರಲ್ಲಿ, ಗುಲ್ಬರ್ಗಾ ವಿಮಾನ ನಿಲ್ದಾಣದ ಜಮೀನಿನಲ್ಲಿರುವ ಹೈಟೆನ್ಷನ್ ಲೈನ್ ಸ್ಥಳಾಂತರಕ್ಕಾಗಿ ರೂ. 112.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರಿಗೆ ಬಿಡುಗಡೆ ಮಾಡಲಾಗಿದೆ.

4. ಮೇಲೆ ಓದಲಾದ ಕ್ರ.ಸಂ. (10) ರಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ, ಇವರು ಗುಲ್ಬರ್ಗಾ ವಿಮಾನ ನಿಲ್ದಾಣ ಅಭಿವೃದ್ಧಿಗಾಗಿ ಭೂಸ್ವಾಧೀನತೆಗೊಳಗಾದ ಮಡಿಯಾಳ ತಾಂಡದ ಪುನರ್ವಸತಿ ಪ್ರದೇಶದಲ್ಲಿ ಶ್ರೀ ಸೇವಾಲಾಲ ಹಾಗೂ ಶ್ರೀ ಜಗದಂಬಾ ದೇವಾಲಯಗಳ ನಿರ್ಮಾಣಕ್ಕಾಗಿ ರೂ. 40.00 ಲಕ್ಷ ಅಂದಾಜಿಸಿ ಹಾಗೂ ಭೂಸ್ವಾಧೀನ ಕೈಗೊಂಡಿರುವ ಜಮೀನಿಗೆ ಸಂಬಂಧಿಸಿದಂತೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಪಾವತಿಸಬೇಕಾದ ಬಾಕಿ ಮೊತ್ತ ರೂ. 14,56,535/– ಗಳನ್ನು ಸೇರಿ ಒಟ್ಟು ರೂ. 54.56 ಲಕ್ಷಗಳಲ್ಲಿ ಪ್ರಸ್ತುತ ಜಿಲ್ಲಾಧಿಕಾರಿಗಳ ಖಾತೆಯಲ್ಲಿ ಲಭ್ಯವಿರುವ ರೂ. 5.27 ಲಕ್ಷಗಳನ್ನು ಹೊರತುಪಡಿಸಿ ಬಾಕಿ ಮೊತ್ತ ರೂ. 49.29 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

5. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 72 ರಾಅವಿ 2008, ಬೆಂಗಳೂರು, ದಿನಾಂಕ: 31ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ವಿಮಾನ ನಿಲ್ದಾಣ ಅಭಿವೃದ್ಧಿಗಾಗಿ ಭೂಸ್ವಾಧೀನ ಕೈಗೊಂಡಿರುವ ಜಮೀನಿಗೆ ಸಂಬಂಧಿಸಿದಂತೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಪಾವತಿಸಬೇಕಾದ ಬಾಕಿ ಮೊತ್ತ ರೂ. 14.56/– ಲಕ್ಷಗಳಲ್ಲಿ ಜಿಲ್ಲಾಧಿಕಾರಿಗಳ ಖಾತೆಯಲ್ಲಿ ಲಭ್ಯವಿರುವ ರೂ. 5.27 ಲಕ್ಷಗಳನ್ನು ಹೊರತುಪಡಿಸಿ ಉಳಿದ ಮೊತ್ತ ರೂ. 9.29 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ, ಇವರಿಗೆ ಬಿಡುಗಡೆ ಮಾಡಿದೆ.

2. ಈ ವೆಚ್ಚವನ್ನು 2011–12 ನೇ ಸಾಲಿನ 5465–01–190–1–05– ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ (ಯೋಜನೆ) 133 - SDP ಯಡಿಯಲ್ಲಿ ಬಾಕಿ ಇರವ ಮೊತ್ತದಲ್ಲಿ ಭರಿಸತಕ್ಕದ್ದು.

3. ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿಸಿದೆ.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆರ್ಥಿಕ ಇಲಾಖೆ 933 ವೆಚ್ಚ 1/2011 ದಿನಾಂಕ : 17–01–2012ರ ಸಹಮತಿ ಮೇರೆಗೆ ಹೊಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್.492

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 48 ರಾಅವಿ 2010, ದಿನಾಂಕ: 20-05-2011.
2. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 48 ರಾಅವಿ 2010, ದಿನಾಂಕ: 16-11-2011.
3. ಪತ್ರ ಸಂಖ್ಯೆ: ಎಲ್.ಎ.ಕ್ಯೂ.ಸಿ.ಆರ್. 72/2011-12, ದಿನಾಂಕ: 23-12-2011, ಮೈಸೂರು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಇವರಿಂದ.

**ಪ್ರಸ್ತಾವನೆ:**

ಮೈಸೂರು ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ದಿನಾಂಕ: 06-10-2005ರಂದು ಭಾರತ ವಿಮಾನ ನಿಲ್ದಾಣಗಳ ಪ್ರಾಧಿಕಾರದೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಅನುಸಾರ ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಳಕೆ ಬಿಲ್ಲನ್ನು ವಿಮಾನದಿಂದ ಸೇವೆ ಕಾರ್ಯಾರಂಭಗೊಂಡ ದಿನಾಂಕದಿಂದ 5 ವರ್ಷಗಳ ಅವಧಿಗೆ ರಾಜ್ಯ ಸರ್ಕಾರದಿಂದ ಭರಿಸಬೇಕಾಗಿರುತ್ತದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ನವೆಂಬರ್ 2010 ರಿಂದ ಏಪ್ರಿಲ್ 2011 ರವರೆಗೆ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಬಿಲ್ಲಿನ ಮೊತ್ತ ರೂ. 28,85,360/- ಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಇವರಿಗೆ ಬಿಡುಗಡೆ ಮಾಡಲಾಗಿದೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಮೇ 2011 ರಿಂದ ಆಗಸ್ಟ್ 2011 ರವರೆಗೆ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲಿನ ಬಾಕಿ ಮೊತ್ತ ರೂ. 15,98,216.00 ಗಳನ್ನು ಬಿಡುಗಡೆ ಮಾಡಲಾಗಿದೆ.

4. ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ. ಇವರು ಪ್ರಸ್ತಾಪಿಸಿರುವ ಅಂಶಗಳನ್ನು ಪರಿಶೀಲಿಸಿ, ಸೆಪ್ಟೆಂಬರ್ 2011 ರಿಂದ ನವೆಂಬರ್ 2011ರ ಅಂತ್ಯಕ್ಕೆ ಬಾಕಿ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತ ರೂ. 12,46,456.00 ಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 48 ರಾಅವಿ 2010, ಬೆಂಗಳೂರು, ದಿನಾಂಕ: 28-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತ ಸೆಪ್ಟೆಂಬರ್ 2011 ರಿಂದ ನವೆಂಬರ್ 2011 ರ ಅಂತ್ಯಕ್ಕೆ ಬಾಕಿ ಇರುವ ಮೊತ್ತ ರೂ. 12,46,456.00 ಗಳನ್ನು (ರೂ. ಹನ್ನೆರಡು ಲಕ್ಷದ ನಲವತ್ತಾರು ಸಾವಿರದ ನಾಲ್ಕು ನೂರ ಐವತ್ತಾರು ಮಾತ್ರ) ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ಇವರಿಗೆ ಬಿಡುಗಡೆ ಮಾಡಿದೆ.

ಈ ಮೊತ್ತವನ್ನು 2011-12ನೇ ಸಾಲಿನ ಲೆಕ್ಕ ಶೀರ್ಷಿಕೆ "5465-01-190-1-05-133 ವಿಶೇಷ ಅಭಿವೃದ್ಧಿ ಯೋಜನೆ"ಯಡಿಯಲ್ಲಿ ಲಭ್ಯವಿರುವ ರೂ. 80.00 ಕೋಟಿಗಳಿಂದ ಭರಿಸತಕ್ಕದ್ದು.

ಈ ಹಣವನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು, ಇವರು ಜಿಲ್ಲಾ ಖಜಾನೆ ಮೈಸೂರು ಇಲ್ಲಿ ಡ್ರಾ ಮಾಡಲು ಅಧಿಕರಿಸಿದೆ. ಉಪ ನಿರ್ದೇಶಕರು, ಎನ್.ಎಂ.ಸಿ. ಬೆಂಗಳೂರು, ಇವರು ಈ ಮೊತ್ತವನ್ನು ಜಿಲ್ಲಾಧಿಕಾರಿಗಳ ಖಾತೆಗೆ ಅಪ್‌ಲೋಡ್ ಮಾಡುವುದು. ಈ ಹಣವನ್ನು ಯೋಜನೆಗೆ ವೆಚ್ಚ ಮಾಡಿ ಉಪಯೋಗಿತಾ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 2008 ದಿನಾಂಕ: 16-05-2008 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್. ನಂ. 493

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ ಕನಕಪುರ ತಾ: ಕೋಡಿಹಳ್ಳಿಯ ಸರ್ಕಾರಿ ಪದವಿ ಕಾಲೇಜಿಗೆ ದಾನಿಗಳ ಹೆಸರನ್ನು ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ: ಕಾಶಿಇ 29 ಯೋಜನೆ 2011-12 ದಿನಾಂಕ: 23-11-2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಇವರು ರಾಮನಗರ ಜಿಲ್ಲೆ ಕನಕಪುರ ತಾ: ಕೋಡಿಹಳ್ಳಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಸ್ವಂತ ಕಟ್ಟಡಕ್ಕಾಗಿ ಶ್ರೀಮತಿ ಗೌರಮ್ಮ ಇವರು ಸರ್ವೆ ನಂ. 117/2ರಲ್ಲಿ 01 ಎಕರೆ 20 ಗುಂಟೆ ಜಮೀನನ್ನು ದಾನವಾಗಿ ನೀಡಿರುತ್ತಾರೆ. ದಾನಿಗಳ ಪುತ್ರ ಹಾಗೂ ಸ್ಥಳೀಯ ಶಾಸಕರಾದ ಶ್ರೀ ಡಿ.ಕೆ. ಶಿವಕುಮಾರ್ ಮಾನ್ಯ ಶಾಸಕರು ಕನಕಪುರ ವಿಧಾನಸಭಾ ಕ್ಷೇತ್ರ ಮತ್ತು ಮಾಜಿ ಸಚಿವರು ಇವರು ಸದರಿ ಡಿಗ್ರಿ ಕಾಲೇಜಿಗೆ ಶ್ರೀಮತಿ ಗೌರಮ್ಮ ಮತ್ತು ಶ್ರೀ. ಡಿ.ಕೆ. ಕೆಂಪೇಗೌಡ ಸರ್ಕಾರಿ ಪದವಿ (ಡಿಗ್ರಿ) ಕಾಲೇಜು' ಎಂದು ನಾಮಕರಣ ಮಾಡಲು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಈ ವಿಷಯದ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 88 ಹೆಚ್‌ಪಿಯು 2011 ದಿನಾಂಕ: 28-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರಾಮನಗರ ಜಿಲ್ಲೆ ಕನಕಪುರ ತಾ: ಕೋಡಿಹಳ್ಳಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 'ಶ್ರೀಮತಿ ಗೌರಮ್ಮ ಮತ್ತು ಶ್ರೀ ಡಿ.ಕೆ. ಕೆಂಪೇಗೌಡ ಸರ್ಕಾರಿ ಪದವಿ (ಡಿಗ್ರಿ) ಕಾಲೇಜು' ಎಂದು ನಾಮಕರಣ ಮಾಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಬೆಂಗಳೂರು. ಇವರಿಗೆ ಸರ್ಕಾರವು ಅನುಮತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. ನಂ. 494

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಬೆಳಗಾವಿ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದಲ್ಲಿ ಸರ್ಕಾರದಿಂದ ಮಂಜೂರಾಗಿರುವ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** **1.** ಸರ್ಕಾರದ ಆದೇಶ ಸಂಖ್ಯೆ: ಇಡಿ 239 ಯುಆರ್‌ಸಿ 2010, ದಿನಾಂಕ: 20-12-2010.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಖಾಲಿ ಇದ್ದ ವಿವಿಧ ವೃಂದದ ಬೋಧಕೇತರ ಹುದ್ದೆಗಳನ್ನು ನೂತನವಾಗಿ ಪ್ರಾರಂಭಿಸಿರುವ ಬೆಳಗಾವಿಯ ರಾಣಿ ಚನ್ನಮ್ಮ ವಿಶ್ವವಿದ್ಯಾಲಯಕ್ಕೆ ಈ ಕೆಳಕಂಡ ಬೋಧಕೇತರ ಹುದ್ದೆಗಳನ್ನು ವರ್ಗಾಯಿಸಿ ಆದೇಶ ಹೊರಡಿಸಲಾಗಿದೆ.

| | | |
|---|---|---|
| 1 | ಉಪಕುಲಸಚಿವರು | 04 (ನಾಲ್ಕು) |
| 2 | ಸಹಾಯಕ ಕುಲಸಚಿವರು | 10 (ಹತ್ತು) |
| 3 | ನಿವಾಸಿ ಅಭಿಯಂತರರು | 01 (ಒಂದು) |
| 4 | ಅಧೀಕ್ಷಕರು | 10 (ಹತ್ತು) |
| 5 | ತೋಟಗಾರಿಕೆ ಅಧೀಕ್ಷಕರು | 01 (ಒಂದು) |
| 6 | ಪ್ರಥಮ ದರ್ಜೆ ಸಹಾಯಕರು | 60 (ಅರವತ್ತು) |
| 7 | ದ್ವಿತೀಯ ದರ್ಜೆ ಸಹಾಯಕರು | 50 (ಐವತ್ತು) |
| 8 | ಡಾಟ ಎಂಟ್ರಿ ಆಪರೇಟರ್ | 40 (ನಲವತ್ತು) |
| 9 | ಡಿ ದರ್ಜೆ ನೌಕರರು | 45 (ನಲವತ್ತೈದು) |
| 10 | ಶೀಘ್ರಲಿಪಿಗಾರರು | 02 (ಎರಡು) |
| 11 | ವೈದ್ಯಾಧಿಕಾರಿಗಳು | 01 (ಒಂದು) |
| 12 | ಕಾಂಪೌಂಡರ್ | 01 (ಒಂದು) |

ಅದರಂತೆ, ಮೇಲ್ಕಂಡ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಸರ್ಕಾರವು ಅನುಮತಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 24 ಯುಆರ್‌ಸಿ 2011 ಬೆಂಗಳೂರು, ದಿನಾಂಕ: 27-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಸರ್ಕಾರದ ಆದೇಶ ಸಂಖ್ಯೆ: ಇಡಿ 239 ಯುಆರ್‌ಸಿ 2010. ದಿನಾಂಕ: 20-12-2010 ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಬೆಳಗಾವಿಯ ರಾಣಿ ಚನ್ನಮ್ಮ ವಿಶ್ವವಿದ್ಯಾಲಯಕ್ಕೆ ವರ್ಗಾಯಿಸಲಾಗಿರುವ ಈ ಕೆಳಕಂಡ ಬೋಧಕೇತರ ಹುದ್ದೆಗಳನ್ನು ಕರ್ನಾಟಕ ವಿಶ್ವವಿದ್ಯಾಲಯಗಳ ಅಧಿನಿಯಮ 2000: ಚಾಲ್ತಿಯಲ್ಲಿರುವ ಪರಿನಿಯಮ ಹಾಗೂ ಸರ್ಕಾರದ ಮೀಸಲಾತಿ ಹಾಗೂ ಇತರೆ ಅನ್ವಯವಾಗುವ ನಿಯಮಗಳನ್ವಯ ಭರ್ತಿ ಮಾಡಿಕೊಳ್ಳಲು ಸರ್ಕಾರವು ಅನುಮತಿ ನೀಡಿ ಆದೇಶ ಹೊರಡಿಸಿದೆ.

| | | |
|---|---|---|
| 1 | ಉಪಕುಲಸಚಿವರು | 04 (ನಾಲ್ಕು) |
| 2 | ಸಹಾಯಕ ಕುಲಸಚಿವರು | 10 (ಹತ್ತು) |
| 3 | ನಿವಾಸಿ ಅಭಿಯಂತರರು | 01 (ಒಂದು) |
| 4 | ಅಧೀಕ್ಷಕರು | 10 (ಹತ್ತು) |
| 5 | ತೋಟಗಾರಿಕೆ ಅಧೀಕ್ಷಕರು | 01 (ಒಂದು) |
| 6 | ಪ್ರಥಮ ದರ್ಜೆ ಸಹಾಯಕರು | 60 (ಅರವತ್ತು) |
| 7 | ದ್ವಿತೀಯ ದರ್ಜೆ ಸಹಾಯಕರು | 50 (ಐವತ್ತು) |

| | | |
|---|---|---|
| 8 | ಡಾಟ ಎಂಟ್ರಿ ಆಪರೇಟರ್ | 40 (ನಲವತ್ತು) |
| 9 | ಡಿ ದರ್ಜೆ ನೌಕರರು | 45 (ನಲವತ್ತೈದು) |
| 10 | ಶೀಘ್ರಲಿಪಿಗಾರರು | 02 (ಎರಡು) |
| 11 | ವೈದ್ಯಾಧಿಕಾರಿಗಳು | 01 (ಒಂದು) |
| 12 | ಕಾಂಪೌಂಡರ್ | 01 (ಒಂದು) |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 863 ವೆಚ್ಚ-8 2011, ದಿನಾಂಕ: 09-01-2012ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಕಾಶ್‌ರಾವ್ ಕೇಸರ್‌ಕರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು)

ಪಿಆರ್ ನಂ. 495

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಹೆಚ್.ಕೆ. ಹಳ್ಳಿ ಸ.ನಂ. 711 ಪೈಕಿ 10-00 ಎಕರೆ, ಜಮೀನನ್ನು ಮೆ. ಜಿವಿಆರ್. ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್ ಬೆಂಗಳೂರು ಇವರಿಗೆ ಕಲ್ಲು ಗಣಿಗಾರಿಕೆಗಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಗಣಿ/77/2011-12 ಮತ್ತು ಗಣಿ/78/2011-12 ದಿನಾಂಕ: 16-08-2011 ಮತ್ತು ದಿನಾಂಕ: 26-11-2011.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರು ಓದಲಾದ ದಿನಾಂಕ: 16-08-2011 ಮತ್ತು ದಿನಾಂಕ: 26-11-2011ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹೆಚ್.ಕೆ. ಹಳ್ಳಿ ಸ.ನಂ. 711 ಪೈಕಿ 10-00 ಎಕರೆ ಜಮೀನನ್ನು ಕಲ್ಲುಪುಡಿ ತೆಗೆಯಲು ಮೆ. ಜಿವಿಆರ್. ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್, ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

2. ಕಲ್ಲಪುಡಿ ತೆಗೆಯಲು ಮೆ. ಜಿವಿಆರ್.ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್, ಬೆಂಗಳೂರು ಇವರಿಗೆ ಬಳ್ಳಾರಿ ಜಿಲ್ಲೆ, ಸಂಡೂರು-ಕೂಡ್ಲಿಗಿ ರಸ್ತೆ, ಸಂಡೂರು-ಹೊಸಪೇಟೆ ರಸ್ತೆ ಹಾಗೂ ಸಂಡೂರು-ತೋರಣಗಲ್ಲು ರಸ್ತೆ ಕಾಮಗಾರಿ ಕೆಲಸ ಮಾಡಲು ಕೆ.ಆರ್.ಡಿ.ಸಿ.ಎಲ್, ಬೆಂಗಳೂರು ಇವರಿಂದ ಮಂಜೂರಾಗಿದ್ದು, ಸದರಿ ಕಾಮಗಾರಿ ಕೆಲಸಕ್ಕೆ 9 ಲಕ್ಷ ಎಂ.ಟಿ. ಮೆಟಲ್ ಅವಶ್ಯಕ ಆಗಿರುತ್ತದೆ. ಅರ್ಜಿದಾರರು ಕೋರಿರುವ ಜಮೀನು ಸರ್ಕಾರಿ ಜಮೀನಾಗಿದ್ದು, ಸದರಿ ಜಮೀನಿನಲ್ಲಿ ಯಾವುದೇ ಅತಿಕ್ರಮಣ ಇರುವುದಿಲ್ಲ. ಗ್ರಾಮದಿಂದ 4 ಕಿ.ಮೀ. ದೂರವಿದ್ದು ರಸ್ತೆ ಸಂಪರ್ಕ ಹೊಂದಿದೆ, ಹಾಗೂ ಅರಣ್ಯ ಪ್ರದೇಶಕ್ಕೆ ಸೇರಿಲ್ಲವೆಂದು ವ್ಯವಸಾಯಕ್ಕೆ ಯೋಗ್ಯ ಇರುವುದಿಲ್ಲವೆಂದು ಹಾಗೂ ಸ್ಥಳವೂ ಸೂಕ್ತವಿರುತ್ತದೆಂದು ವರದಿಸಿರುತ್ತಾರೆ.

3. ಪ್ರಸ್ತಾಪಿತ ಹೆಚ್.ಕೆ. ಹಳ್ಳಿ ಸ.ನಂ. 711 ಪೈಕಿ 10-00 ಎಕರೆ ಜಮೀನು ಸರ್ಕಾರಿ ಕಂದಾಯ ಜಮೀನಾಗಿರುತ್ತದೆ. ಕೆ.ಆರ್.ಡಿ.ಸಿ.ಎಲ್, ಇವರು ತೋರಣಗಲ್ಲಿನಿಂದ ಕೂಡ್ಲಿಗಿ ವರೆಗೆ ಮತ್ತು ಸಂಡೂರಿನಿಂದ ಹೊಸಪೇಟೆ ವರೆಗಿನ ರಸ್ತೆಗಳು ಸಂಪೂರ್ಣವಾಗಿ ಹಾಳಾಗಿರುವುದರಿಂದ ಅವುಗಳನ್ನು ಉನ್ನತ ದರ್ಜೆ ರಸ್ತೆಗಳನ್ನಾಗಿ ಮಾಡಲು ಟೆಂಡರ್ ಕರೆದಿದ್ದು, ಮೆ. ಜಿವಿಆರ್.ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್, ಬೆಂಗಳೂರು ಇವರಿಗೆ ಕಾಮಗಾರಿ ನಿರ್ವಹಣೆಯನ್ನು ವಹಿಸಲಾಗಿದ್ದು, ಸದರಿಯವರು ಅಗತ್ಯವಿರುವ ಜೆಲ್ಲಿ ಮೆಟಲ್‌ಗಾಗಿ ಈಗಾಗಲೇ ಉಪನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಹೊಸಪೇಟೆ ಇವರಿಗೆ ಅರ್ಜಿ ಸಲ್ಲಿಸಿರುತ್ತಾರೆ. ಸರ್ಕಾರದ ದಿನಾಂಕ: 07-09-2011ರ ಹೊಸ ನೀತಿಯಂತೆ ನೇಮಕ ಮಾಡಿರುವ ಜಿಲ್ಲಾ ಮಟ್ಟದ ಸಮಿತಿಯು ಇದಕ್ಕೆ ಅನುಮೋದನೆ ನೀಡಬೇಕಾಗಿದ್ದು. ಈಗ ಪ್ರಸ್ತಾಪಿಸಿದ ಜಮೀನಿಗೆ ಮಂಜೂರಾದ ನಂತರವಷ್ಟೆ ಪರವಾನಿಗೆ ನೀಡಬೇಕಾಗಿರುತ್ತದೆ. ಸದರಿ ಕಂಪೆನಿಯು ರಸ್ತೆ ಕಾಮಗಾರಿ ಗುತ್ತಿಗೆ ಪಡೆದಿರುವ ಬಗ್ಗೆ ಡಿವಿಜನಲ್ ಇಂಜಿನಿಯರ್, ಕೆ.ಆರ್.ಡಿ.ಸಿ.ಎಲ್ ಇವರು ದಿನಾಂಕ: 22-07-2011 ರಲ್ಲಿ Work Order ನೀಡಿರುತ್ತಾರೆ. ರಸ್ತೆ ಕಾಮಗಾರಿ ನಿರ್ವಹಿಸಲು ಅಗತ್ಯವಾಗಿ ಬೇಕಾದ ಕಲ್ಲಿನ ಪ್ರಮಾಣ ಮತ್ತು ಕಲ್ಲುಗಣಿ ಪ್ರದೇಶದ ಬಗ್ಗೆ ಮಾಡಿರುವ ಅಂದಾಜು ಪಟ್ಟಿಯಂತೆ ಒಟ್ಟು 900788 ಮೆಟ್ರಿಕ್ ಟನ್ ಅಗತ್ಯವಿರುತ್ತದೆಂದು ಅಂದಾಜು ಪಟ್ಟಿಯೊಂದಿಗೆ ಸಲ್ಲಿಸಿರುತ್ತಾರೆ. ಪ್ರಸ್ತಾಪಿತ 10-00 ಎಕರೆ ಜಮೀನನ್ನು ಗುತ್ತಿಗೆ ನೀಡುವುದು ಅವಶ್ಯಕವಾಗಿರುವುದರಿಂದ ಸರ್ಕಾರದ ಪೂರ್ವಾನುಮೋದನೆ ನೀಡಲು ಕೋರಿರುತ್ತಾರೆ.

4. ಜಿಲ್ಲಾಧಿಕಾರಿಗಳು ಬಳ್ಳಾರಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 55 ಎಲ್‌ಜಿಇ 2011 ಬೆಂಗಳೂರು, ದಿನಾಂಕ: 23-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹೆಚ್.ಕೆ.ಹಳ್ಳಿ ಸ.ನಂ. 711ರ ಪೈಕಿ 10-00 ಎಕರೆ ಜಮೀನನ್ನು ಜೆಲ್ಲಿ ಮೆಟಲ್ ತೆಗೆದು ರಸ್ತೆ ದುರಸ್ತಿಗಾಗಿ ಉಪಯೋಗಿಸಿಕೊಳ್ಳಲು ಮೆ. ಜಿವಿಆರ್.ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್, ಬೆಂಗಳೂರು ಇವರಿಗೆ ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 19ರನ್ವಯ ಮೊದಲ 2 ವರ್ಷಗಳ ಅವಧಿಗೆ ಮಾರುಕಟ್ಟೆ ದರದ ಶೇಕಡ 10 ರಷ್ಟು ಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಮಂಜೂರು ಮಾಡಲು ಸರ್ಕಾರದ ಅನುಮತಿ ನೀಡಿ ಆದೇಶಿಸಲಾಗಿದೆ.

1. ಕಲ್ಲುಗಣಿ ಕೈಗೊಳ್ಳಲು ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಪರವಾನಿಗೆ ಪಡೆದು ರಸ್ತೆಗಾಗಿ ಬೇಕಾಗುವ ಕಲ್ಲು ಮಾತ್ರ ತೆಗೆಯಬೇಕು.
2. ಪರಿಸರ ರಕ್ಷಣೆ ಬಗ್ಗೆ ನಿಗದಿಪಡಿಸಿದ ಮಾರ್ಗಸೂಚಿ/ನಿಯಮಗಳನ್ನು ಪಾಲಿಸಬೇಕು.
3. ಟೆಂಡರ್ ಅವಧಿಯ ವರೆಗೆ ಮಾತ್ರ ಗುತ್ತಿಗೆ ನೀಡಿ ನಂತರ ರದ್ದುಪಡಿಸಬೇಕು.

4. ಕೆ.ಆರ್.ಡಿ.ಸಿ.ಎಲ್. ಸಂಸ್ಥೆಯು ಗುತ್ತಿಗೆ ಪಡೆದ ಕಂಪೆನಿ ಕಲ್ಲನ್ನು ರಸ್ತೆಗಾಗಿ ಮಾತ್ರ ಉಪಯೋಗಿಸುತ್ತಿದೆ ಎಂದು ಖಾತರಿಪಡಿಸಿಕೊಳ್ಳಬೇಕು.
5. ಅರಣ್ಯ ಮತ್ತು ಪರಿಸರ ಇಲಾಖೆಯಿಂದ ಅನುಮತಿ ಪಡೆಯಬೇಕು.
6. ಮೇಲೆ ತಿಳಿಸಿದ ಷರತ್ತು ಉಲ್ಲಂಘಿಸಿದರೆ ಜಮೀನು ಗುತ್ತಿಗೆ ನೀಡಿದ ಗುತ್ತಿಗೆ ಕರಾರನ್ನು ರದ್ದುಪಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1076 ವೆಚ್ಚ-7/2011, ದಿನಾಂಕ: 22-12-2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜಿ. ಲಕ್ಷ್ಮೀನಾರಾಯಣ**
ಪಿಆರ್ ನಂ. 496
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ.-3)

## ಕಂದಾಯ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಕಂಇ 21 ಎಡಿಇ 2011 ಬೆಂಗಳೂರು, ದಿನಾಂಕ: 23-01-2012.**

ಸರ್ಕಾರದ ಆದೇಶ ಸಂಖ್ಯೆ: ಕಂಇ 21 ಎಡಿಇ 2011 ದಿನಾಂಕ: 25-06-2011 ರಲ್ಲಿನ ಆದೇಶದ ಭಾಗದ 5ನೇ ಸಾಲಿನಲ್ಲಿ ಲೋಕಾಯುಕ್ತಕ್ಕೆ ಎಂಬುದರ ಬದಲಾಗಿ ಮಾನ್ಯ ಲೋಕಾಯುಕ್ತರಿಗೆ ಎಂಬುದಾಗಿ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಗೋಪಾಲಯ್ಯ**
ಪಿಆರ್ ನಂ. 497
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

## ಕಂದಾಯ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ: ಕಂಇ 63 ಎಲ್‌ಜಿಡಿ 2010 ಬೆಂಗಳೂರು, ದಿನಾಂಕ: 25-01-2012.**

ಸರ್ಕಾರದ ಸಮ ಸಂಖ್ಯೆಯ ದಿನಾಂಕ: 12-12-2011ರ ಆದೇಶದಲ್ಲಿ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಹಿರೇಭೂದಿಹಾಳ ಗ್ರಾಮದ ಸ.ನಂ. 42 ಎಂದು ನಮೂದಾಗಿದ್ದು, ಅದರ ಬದಲಾಗಿ ಸರ್ವೆ ನಂಬರ್ 46 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜಿ. ಲಕ್ಷ್ಮೀನಾರಾಯಣ**
ಪಿಆರ್ ನಂ. 498
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ-3)

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಭೂ ಕಂದಾಯ ಕಾಯ್ದೆ, ಕರ್ನಾಟಕ ಭೂ ಕಂದಾಯ ನಿಯಮಗಳು, ಕರ್ನಾಟಕ ಭೂ ಮಂಜೂರಾತಿ ನಿಯಮಗಳು, ಕರ್ನಾಟಕ ಭೂ ಸುಧಾರಣಾ ಕಾಯ್ದೆ ಮತ್ತು ಪಿಟಿಸಿಎಲ್ ಕಾಯ್ದೆಗಳಿಗೆ ತಿದ್ದುಪಡಿ ತರುವ ಬಗ್ಗೆ

**ಪ್ರಸ್ತಾವನೆ :**

ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಕರ್ನಾಟಕ ಭೂ ಕಂದಾಯ ನಿಯಮಗಳು 1966, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969, ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ಮತ್ತು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ (ಕೆಲವು ಜಮೀನುಗಳ ಪರಭಾರೆ ನಿಷೇಧ) ಕಾಯ್ದೆ 1978-ಕಾಯ್ದೆ ನಿಯಮಾವಳಿಗಳು ಸುಮಾರು 46 ವರ್ಷಗಳಷ್ಟು ಹಳೆಯದಾಗಿದ್ದು, ಅಂದಿನ ದಿನಮಾನ ಪರಿಸ್ಥಿತಿಗನುಗುಣವಾಗಿ ಮತ್ತು ಅಂದಿನ ಸಾಮಾಜಿಕ, ಭೌತಿಕ ಮತ್ತು ಆರ್ಥಿಕ ಪರಿಸ್ಥಿತಿಗನುಗುಣವಾಗಿ ಈ ನಿಯಮಗಳನ್ನು ರಚಿಸಲಾಗಿರುತ್ತದೆ. ಅಂದಿನ ಕಾಲಮಾನದಲ್ಲಿ ಜಮೀನಿಗೆ ಹೆಚ್ಚು ಒತ್ತಡ ಇರಲಿಲ್ಲ ಹಾಗು ಜಮೀನನ್ನು ಉಳುಮೆ ಮಾಡುವುದು ಅಷ್ಟು ಲಾಭದಾಯಕವಾಗಿರಲಿಲ್ಲ. ಜಮೀನನ್ನು ಇತರೆ ಉದ್ದೇಶಗಳಿಗೆ ಪರಿವರ್ತನೆ ಮಾಡಿಕೊಳ್ಳುವ ಅವಕಾಶಗಳು ಕಡಿಮೆ ಇದ್ದವು.

ಆದರೆ ನಂತರದ ಈಗಿನ ಪರಿಸ್ಥಿತಿಯನ್ನು ಅವಲೋಕಿಸಿದಲ್ಲಿ ಜಮೀನಿನ ಮೇಲೆ ಹೆಚ್ಚಿನ ಒತ್ತಡವಿದೆ. ಜಮೀನನ್ನು ವ್ಯವಸಾಯ ಉದ್ದೇಶಗಳಿಗಿಂತ ವ್ಯವಸಾಯೇತರ ಉದ್ದೇಶಗಳಿಗೆ ಬಳಸುವುದು ಹೆಚ್ಚಾಗಿದೆ. ಆಧುನೀಕರಣ, ಜಾಗತೀಕರಣ ಮತ್ತು ಕೈಗಾರಿಕೀಕರಣಗಳ ಫಲದಿಂದ ಸಾಮಾಜಿಕ ಮತ್ತು ಆರ್ಥಿಕ ಕಲ್ಪನೆಯನ್ನು ಬದಲಾಯಿಸಿದೆ. ಸಾಮಾಜಿಕ ಮತ್ತು ಆರ್ಥಿಕ ಸದೃಢೀಕರಣಕ್ಕಾಗಿ ಜಮೀನನ್ನು ಹೆಚ್ಚು ಲಾಭದಾಯಕ ಮತ್ತು ಹೆಚ್ಚು ಉತ್ಪಾದಕತೆಯನ್ನು ಕೊಡುವಂತಹ ಉದ್ದೇಶಗಳಿಗೆ ಬಳಸಿಕೊಳ್ಳುವಂತಹ ಹವ್ಯಾಸಗಳು ಹೆಚ್ಚಿಗೆ ಕಂಡುಬರುತ್ತಿವೆ. ಹೀಗಾಗಿ ಸರ್ಕಾರಿ ಜಮೀನನ್ನು ಒತ್ತುವರಿ ಮಾಡಿಕೊಳ್ಳುವುದು ಹೆಚ್ಚಾಗಿದೆ. ಈ ಎಲ್ಲಾ ಆಗುಹೋಗುಗಳ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆ ಮತ್ತು ನಿಯಮಾವಳಿಗಳಿಗೆ ಈ ಕೆಳಕಂಡ ಅಂಶಗಳನ್ನು ಆಧರಿಸಿ ತಿದ್ದುಪಡಿ ತರುವುದು ಅಗತ್ಯವಾಗಿದೆ.

1. ಸರ್ಕಾರಿ ಜಮೀನನ್ನು ಕಾಪಾಡಿಕೊಳ್ಳುವುದು ಮತ್ತು ಸರ್ಕಾರಿ ಭೂಮಿಯ ಮೇಲೆ ಆದಷ್ಟು ಒತ್ತುವರಿಯನ್ನು ತಡೆಗಟ್ಟುವುದು ಮತ್ತು ಅದನ್ನು ಸರಿಯಾದ ಉದ್ದೇಶಗಳಿಗೆ ಬಳಸಿಕೊಳ್ಳುವುದು.

2. ಹಿಡುವಳಿ ಜಮೀನು ಮತ್ತು ಹಿಡುವಳಿದಾರರ ರಕ್ಷಣೆಗೆ ಮತ್ತು ಅವರ ಖಾತೆಗಳ ರಕ್ಷಣೆಗೆ ಸರಿಯಾದ ವ್ಯವಸ್ಥೆಗಳನ್ನು ಕಲ್ಪಿಸುವುದು.
3. ಜಮೀನಿನ ಮೇಲಿನ ಅಕ್ರಮಗಳು ಮತ್ತು ಅಪರಾಧೀಕರಣವನ್ನು ತಡೆಗಟ್ಟಲು ಕ್ರಮಕೈಗೊಳ್ಳುವುದು.
4. ಜಮೀನಿನ ಕುರಿತಾದ ಅನೇಕ ಕಟ್ಟಳೆಗಳು ಅರ್ಜಿಗಳನ್ನು ತ್ವರಿತಗತಿಯಲ್ಲಿ ವಿಲೇವಾರಿ ಮಾಡಿ ಭೂ ಕಂದಾಯದ ಆಡಳಿತವನ್ನು ಜಾರಿಗೊಳಿಸುವುದು ಮತ್ತು ಜನಮುಖಿಯಾಗಿ ಮಾಡುವುದು.

ಮೇಲ್ಕಂಡ ಉದ್ದೇಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆ/ನಿಯಮಾವಳಿಗಳನ್ನು ಪರಿಶೀಲಿಸಿ ಅಗತ್ಯ ವಿಷಯಗಳ ಸೇರ್ಪಡೆ ಮಾಡುವುದು ಮತ್ತು ಅವಶ್ಯವಿದ್ದಲ್ಲಿ ಮಾರ್ಪಾಡು ಮಾಡುವುದು ಹಾಗೂ ಅನಗತ್ಯ ವಿಷಯಗಳನ್ನು ಕೈಬಿಡುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961, ಕರ್ನಾಟಕ ಭೂ ಕಂದಾಯ ನಿಯಮಗಳು 1966 ಹಾಗೂ ಕರ್ನಾಟಕ ಭೂ ಮಂಜೂರಾತಿ ನಿಯಮ 1969 ಮತ್ತು ಪಿಟಿಸಿಎಲ್ ಕಾಯ್ದೆ 1978ಗೆ ತಿದ್ದುಪಡಿ ತರುವ ಸಂಬಂಧ ಪರಿಶೀಲಿಸಿ ವರದಿ ಪಡೆಯಲು ತಜ್ಞರನ್ನು ನೇಮಿಸುವ ಅಗತ್ಯವನ್ನು ಮನಗಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 185 ಎಲ್‌ಜಿಪಿ 2011, ಬೆಂಗಳೂರು, ದಿನಾಂಕ:27-01-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಕರ್ನಾಟಕ ಭೂ ಕಂದಾಯ ನಿಯಮಗಳು 1966, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969, ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ಮತ್ತು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ (ಕೆಲವು ಜಮೀನುಗಳ ಪರಭಾರೆ ನಿಷೇಧ) ಕಾಯ್ದೆ 1978-ಕಾಯ್ದೆ ಬಗ್ಗೆ ಪುನರ್ ಪರಿಶೀಲಿಸಿ ಸೂಕ್ತ ಬದಲಾವಣೆ/ತಿದ್ದುಪಡಿ ತರುವ ಬಗ್ಗೆ ಪರಿಶೀಲಿಸಿ ವರದಿ ನೀಡಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ತಜ್ಞರ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ನೇಮಿಸಿ ಆದೇಶಿಸಲಾಗಿದೆ.

| | | |
|---|---|---|
| 1. | ಶ್ರೀ ಎಂ.ಆರ್.ಹೆಗಡೆ<br>ನಿವೃತ್ತ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು<br>ಹಾಗೂ ಶಾಸನ ರಚನಾ ಇಲಾಖೆ. | ಅಧ್ಯಕ್ಷರು |
| 2. | ಶ್ರೀ ಜಿ.ಎನ್. ನಾಯಕ್ ಐ.ಎ.ಎಸ್. (ನಿವೃತ್ತ) | ಸದಸ್ಯರು |
| 3. | ಶ್ರಿ ಜನಾರ್ಧನರಾವ್, ಐ.ಎ.ಎಸ್.(ನಿವೃತ್ತ) | ಸದಸ್ಯರು |
| 4. | ಶ್ರೀ ಶಿವನಂಜಯ್ಯ, ಕೆ.ಎ.ಎಸ್.<br>(ಹಿರಿಯ ವೇತನಶ್ರೇಣಿ) | ಸದಸ್ಯರು |

**ಸಮಿತಿಯು 3 ತಿಂಗಳಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ.ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ.)

ಪಿ.ಆರ್.499

## ಕಂದಾಯ ಸಚಿವಾಲಯ

**ತಿದ್ದುಪಡಿ**

**ಆದೇಶ ಸಂಖ್ಯೆ: ಆರ್‌ಡಿ 636 ಎಲ್‌ಜಿಬಿ 2011 ಬೆಂಗಳೂರು, ದಿನಾಂಕ:30-01-2012**

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 636 ಎಲ್‌ಜಿಬಿ 2011 ದಿನಾಂಕ:12-01-2011 ಎಂದಿರುವುದನ್ನು ದಿನಾಂಕ : 12-01-2012 ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ.ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ.)

ಪಿ.ಆರ್.500

## ಕಂದಾಯ ಸಚಿವಾಲಯ

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಸರ್ವತ್ರ ನೋಂದಣಿ/ಎನ್‌ಕಂಬರೆನ್ಸ್ ಸರ್ಟಿಫಿಕೇಟ್ ಸಂಬಂಧವಾಗಿ ಕಂಪ್ಯೂಟರ್ ಮತ್ತು ಯುಪಿಎಸ್ ಖರೀದಿಸಲು ಟೆಂಡರ್ ಕರೆಯುವ ಕುರಿತು.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ:ಕಂಇ 112 ಮುನೋಮು 2011 ದಿನಾಂಕ:9-1-2012
2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ:ಸಿಒಎಂಪಿ 33/2004-05, ದಿನಾಂಕ:18-1-2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ದಿನಾಂಕ:9-1-2012ರ ಆದೇಶದಲ್ಲಿ ಬೆಂಗಳೂರು ನಗರದ 43 ಉಪ ನೋಂದಣಿ ಕಛೇರಿಗಳಿಗೆ ಸರ್ವತ್ರ ನೋಂದಣಿ/ಎನ್‌ಕಂಬರೆನ್ಸ್ ಸರ್ಟಿಫಿಕೇಟ್ ಸಂಬಂಧವಾಗಿ ಕಾರ್ಯ ನಿರ್ವಹಿಸಲು ಸಂಬಂಧವಾಗಿ 86 ಕಂಪ್ಯೂಟರ್ ಹಾಗೂ 43 ಯುಪಿಎಸ್ ಕಾನ್‌ಫಿಗರೇಷನ್‌ಗಳನ್ನು ಒಟ್ಟು ರೂ.70,52,000/-ಗಳ ವೆಚ್ಚದಲ್ಲಿ 2011-12ನೇ ಸಾಲಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಅನ್ವಯ ಖರೀದಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಮೇಲ್ಕಂಡ ಸಾಮಗ್ರಿಗಳನ್ನು ಇ–ಆಡಳಿತ ಇಲಾಖೆಯಲ್ಲಿ ನೋಂದಾಯಿಸಿದ ಪೂರೈಕೆದಾರರಿಂದ 2012, ಫೆಬ್ರವರಿ ಅಂತ್ಯದೊಳಗಾಗಿ ಖರೀದಿಸಿ ಸಂಬಂಧಪಟ್ಟ ಉಪ ನೋಂದಣಿ ಕಛೇರಿಗಳಲ್ಲಿ ಅಳವಡಿಸಲು ಉದ್ದೇಶಿಸಲಾಗಿರುತ್ತದೆ, ಈ ರೀತಿಯಾಗಿ ಖರೀದಿಸಿ ಪೂರೈಸುವ ಸಾಮಗ್ರಿಗಳಿಗೆ ಖರೀದಿ ವೆಚ್ಚದ ಬಿಲ್ಲನ್ನು ಸರ್ಕಾರಿ ಖಜಾನೆಗೆ ಮಾರ್ಚ್ 2012 ತಿಂಗಳಿನ 15ನೇ ದಿನಾಂಕದೊಳಗೆ ಸರ್ಕಾರಿ ಖಜಾನೆಗೆ ಸಲ್ಲಿಸಬೇಕಾಗಿರುತ್ತದೆ. ಪ್ರಸ್ತುತ ಮೇಲಿನಂತೆ ಕ್ರಮ ವಹಿಸಲು ಸಮಯಾವಕಾಶ ಕಡಿಮೆ ಇರುವುದರಿಂದ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000ರ ನಿಯಮ 17(ಎ) ಪ್ರಕಾರ ರೂ.2.00 ಕೋಟಿ ಅಂದಾಜು ವೆಚ್ಚದವರೆಗಿನ ಸಾಮಗ್ರಿ ಖರೀದಿ ಸಂಬಂಧದ ಟೆಂಡರ್‌ಗೆ ಕನಿಷ್ಠ 30 ದಿವಸಗಳ ಅವಧಿಯ ನೋಟೀಸು ನೀಡಬೇಕಾಗಿರುತ್ತದೆ, ಆದ್ದರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000 ನೇದ್ದರ ನಿಯಮ 17(2) ಅನ್ವಯ ಮೇಲ್ಕಂಡ ಸಾಮಗ್ರಿಗಳನ್ನು ಖರೀದಿಸುವ ಸಂಬಂಧದ ಟೆಂಡರ್ ನೋಟೀಸು ಅವಧಿಯನ್ನು 30 ದಿವಸಗಳಿಂದ 5 ದಿವಸಗಳಿಗೆ ಇಳಿಸಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 112 ಮುನೋಮು 2011, ಬೆಂಗಳೂರು, ದಿನಾಂಕ:28–01–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯು ಬೆಂಗಳೂರು ನಗರದ 43 ಉಪ ನೋಂದಣಿ ಕಛೇರಿಗಳಿಗೆ ಸರ್ವತ್ರ ನೋಂದಣಿ/ಸರ್ವತ್ರ ಎನ್‌ಕಂಬರೆನ್ಸ್ ಸರ್ಟಿಫಿಕೇಟ್ ಸಂಬಂಧವಾಗಿ ಕಾರ್ಯ ನಿರ್ವಹಿಸಲು ಸಂಬಂಧವಾಗಿ 86 ಕಂಪ್ಯೂಟರ್ ಹಾಗೂ 43 ಯುಪಿಎಸ್ ಕಾನ್‌ಫಿಗರೇಷನ್‌ಗಳನ್ನು ಒಟ್ಟು ರೂ.70,52,000/– ಗಳ ವೆಚ್ಚದಲ್ಲಿ 2011–12ನೇ ಸಾಲಿಗೆ ಖರೀದಿಸುವ ಸಂಬಂಧ ಗುತ್ತಿಗೆದಾರರ ಆಯ್ಕೆಗಾಗಿ ಟೆಂಡರ್ ಕರೆಯಲು ನೋಟಿಫಿಕೇಷನ್ ಅವಧಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮಗಳು, 2000ರ ನಿಯಮ 17(2)ರ (ಕೆ.ಪಿ.ಟಿ.ಟಿ.) ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 15 ದಿನಗಳಿಗೆ ನಿಗಧಿಪಡಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ.ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋಂ.&ಮು)

ಪಿ.ಆರ್.501

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಖರೀದಿ ಬಗ್ಗೆ

**ಪ್ರಸ್ತಾವನೆ :**

1. ವಿದ್ಯುಚ್ಛಕ್ತಿ ಕಾಯ್ದೆ 2003ರ ಕಲಂ 86(2)ರ ಅಡಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ಸರ್ಕಾರಕ್ಕೆ ದಿನಾಂಕ 1ನೇ ಜೂನ್ 2010ರಂದು ಕರ್ನಾಟಕದಲ್ಲಿ ವಿದ್ಯುತ್ ವಿತರಣೆಯ ಸ್ಥಿತಿಯನ್ನು ಸುಧಾರಿಸಲು ಸಲಹೆಯನ್ನು ನೀಡಿರುತ್ತದೆ. 1ನೇ ಜೂನ್ 2010ರ ಪತ್ರದಲ್ಲಿ ಆಯೋಗವು ವಿದ್ಯುತ್‌ನ ಬೇಡಿಕೆ ಮತ್ತು ಲಭ್ಯತೆಯ ಪ್ರಮಾಣವನ್ನು ಅಂದಾಜಿಸಿದ್ದು, ವಿತರಣಾ ಕಂಪನಿಗಳು ಪ್ರತಿ ವರ್ಷಕ್ಕೆ ಸುಮಾರು 5000 ದಶಲಕ್ಷ ಯೂನಿಟ್ ವಿದ್ಯುತ್ ಅನ್ನು 3 ವರ್ಷಗಳಲ್ಲಿ ಇರಬಹುದಾದ ವಿದ್ಯುತ್ ಬೇಡಿಕೆಯನ್ನು ನೀಗಿಸಲು ಕರಾರನ್ನು ಮಾಡಿಕೊಳ್ಳಲು ಶಿಫಾರಸ್ಸು ಮಾಡಿದೆ. ಇದಲ್ಲದೇ, ಜಲವಿದ್ಯುತ್ ಯೋಜನೆಯ ವಿದ್ಯುತ್ ಉತ್ಪಾದನಾ ಪ್ರಮಾಣವು ಪ್ರೊಜೆಕ್ಟೆಡ್ ಉತ್ಪಾದನೆಗಿಂತ ಕಡಿಮೆ ಆದಲ್ಲಿ ಬೇರೆ ಮೂಲಗಳಿಂದ ವಿದ್ಯುತ್ ಪಡೆಯುವುದನ್ನು ಸೂಕ್ತವಾಗಿ ಹೆಚ್ಚಿಸಲು ಪ್ರಸ್ತಾಪಿಸಿದೆ.

2. ರಾಜ್ಯದಲ್ಲಿನ ವಿದ್ಯುತ್ ಕೊರತೆಯನ್ನು ನೀಗಿಸಲು ಮತ್ತು ಸಾರ್ವಜನಿಕ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್ ರವರು ವಿದ್ಯುತ್ ಖರೀದಿಸಿರುವ ವಿಷಯಕ್ಕೆ ಸಂಬಂಧಿಸಿದಂತೆ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 66 ಪಿಪಿಸಿ 2011, ಬೆಂಗಳೂರು, ದಿನಾಂಕ:30–01–2012.**

ಸಾರ್ವಜನಿಕ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್, ಇವರು ವಿದ್ಯುತ್ ಖರೀದಿಸಲು ತೆಗೆದುಕೊಂಡ ಈ ಕೆಳಗಿನ ಕ್ರಮಗಳಿಗೆ ಘಟನೋತ್ತರ ಅನುಮೋದನೆಯನ್ನು ನೀಡಿದೆ.

(i) ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ಅನುಮೋದಿಸಿದ 1ನೇ ಸೆಪ್ಟಂಬರ್ 2010 ರಿಂದ 31ನೇ ಮೇ 2011ರ ವರೆಗೆ ಟೆಂಡರ್ ಮುಖಾಂತರ 900 ಮೆಗಾ ವ್ಯಾಟ್‌ನಿಂದ 973 ಮೆಗಾ ವ್ಯಾಟ್ ಆರ್‌ಟಿಸಿ ನಿಖರ ವಿದ್ಯುತ್ ಖರೀದಿಸಿರುವ ಬಗ್ಗೆ ಮತ್ತು ಜನವರಿ 2011ರಿಂದ ಏಪ್ರಿಲ್ 2011ರ ವರೆಗೆ ಬೈಲ್ಯಾಟರಲ್ ಆಧಾರದ ಮೇಲೆ ಚತ್ತೀಸ್‌ಘಡ್ ರಾಜ್ಯದಿಂದ 300 ಮೆಗಾ ವ್ಯಾಟ್ ಆರ್‌ಟಿಸಿ ನಿಖರ ವಿದ್ಯುತ್‌ಅನ್ನು ಪಡೆಯಲು ತೆಗೆದುಕೊಂಡ ಕ್ರಮಕ್ಕೆ ;

(ii) ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ಅನುಮೋದಿಸಿದಂತೆ 1ನೇ ಸೆಪ್ಟೆಂಬರ್ 2011 ರಿಂದ 15ನೇ ಜೂನ್ 2013ರ ವರೆಗೆ ಟೆಂಡರ್ ಮುಖಾಂತರ 630 ಮೆಗಾ ವ್ಯಾಟ್ ವಿದ್ಯುತ್‌ಅನ್ನು ಪಡೆಯಲು ತೆಗೆದುಕೊಂಡ ಕ್ರಮಕ್ಕೆ ;

(iii) ವಿದ್ಯುತ್ ಬೇಡಿಕೆಯು ಹೆಚ್ಚಾಗಿದ್ದರಿಂದ 1ನೇ ಅಕ್ಟೋಬರ್ 2011ರಿಂದ 15ನೇ ಜೂನ್ 2013ರ ವರೆಗೆ ಹೆಚ್ಚುವರಿಯಾಗಿ 150 ಮೆಗಾ ವ್ಯಾಟ್ ವಿದ್ಯುತ್ತನ್ನು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ಅನುಮೋದಿಸಿದ ಮೆ: ನ್ಯಾಷನಲ್ ಎನರ್ಜಿ ಟ್ರೇಡಿಂಗ್ ಅಂಡ್ ಸರ್ವೀಸಸ್ ಲಿಮಿಟೆಡ್, ಲ್ಯಾನ್‌ಕೊ–ಕೊಂಡಪಲ್ಲಿ, ಆಂಧ್ರಪ್ರದೇಶರವರಿಂದ ವಿದ್ಯುತ್ ಪಡೆಯಲು ತೆಗೆದುಕೊಂಡಿರುವ ಕ್ರಮಕ್ಕೆ ;

(iv) ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ಅನುಮೋದಿಸಿದಂತೆ ಮೆ: ಪಿಟಿಸಿ ಇಂಡಿಯಾ ಲಿಮಿಟೆಡ್., ರವರಿಂದ ಅಕ್ಟೋಬರ್ 2011ರಲ್ಲಿ ಕೆಪಿಟಿಸಿಎಲ್ ಫೆರಿಫೆರಿಯಲ್ಲಿ ಪ್ರತಿ ಯೂನಿಟ್‌ಗೆ ರೂ. 4.26 ರಂತೆ 200 ಮೆಗಾ ವ್ಯಾಟ್ ಮತ್ತು 10.20 ಮೆಗಾ ವ್ಯಾಟ್ ವಿದ್ಯುತ್ ಅನ್ನು ಮೆ: ಹರೆಕೃಷ್ಣ ಮೆಟಾಲಿಕ್ಸ್ ಲಿಮಿಟೆಡ್ ರವರಿಂದ ಖರೀದಿಸಿರುವುದಕ್ಕೆ ;

(v) ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ಅನುಮೋದಿಸಿದಂತೆ ಅಕ್ಟೋಬರ್ 2011ರಿಂದ ಮೇ 2012ರ ವರೆಗೆ ಮೆ: ಪಿಟಿಸಿ ಇಂಡಿಯಾ ಲಿಮಿಟೆಡ್., ರವರಿಂದ ಸರಾಸರಿ 80 ಮೆಗಾ ವ್ಯಾಟ್ ಮತ್ತು ಮೆ: NETS (ಲ್ಯಾನ್‌ಕೊ–ಕೊಂಡಪಲ್ಲಿ) ರವರಿಂದ 50 ಮೆಗಾ ವ್ಯಾಟ್ ಗರಿಷ್ಠ ಅವಧಿಯ ವಿದ್ಯುತ್ ಖರೀದಿಗೆ (Peak Hours) ;

(vi) ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ಅನುಮೋದಿಸಿದಂತೆ ಮೆ:ಟಾಟಾ ಪವರ್ ಟ್ರೇಡಿಂಗ್ ಕಂಪನಿ ಲಿಮಿಟೆಡ್., ರವರಿಂದ 1ನೇ ಡಿಸೆಂಬರ್ 2011ರಿಂದ 15ನೇ ಜೂನ್ 2012ರ ವರೆಗೆ 300 ಮೆಗಾ ವ್ಯಾಟ್ ಗರಿಷ್ಠ ಅವಧಿ ವಿದ್ಯುತ್ ಖರೀದಿಗೆ (Peak Hours) ;

(vii) ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ಅನುಮೋದಿಸಿದಂತೆ 26ನೇ ನವೆಂಬರ್ 2011ರಿಂದ 15ನೇ ಜೂನ್ 2012ರ ವರೆಗೆ 210.10 ಮೆಗಾ ವ್ಯಾಟ್ ನಿಖರ ಆರ್.ಟಿ.ಸಿ. ವಿದ್ಯುತ್ ಅನ್ನು ಖರೀದಿಸಲು ತೆಗೆದುಕೊಂಡ ಕ್ರಮಕ್ಕೆ.

ಹಾಗೆಯೇ, ರಾಜ್ಯದಲ್ಲಿನ ವಿದ್ಯುತ್ ಪರಿಸ್ಥಿತಿಯನ್ನು ಕಾಲಕಾಲಕ್ಕೆ ಅವಲೋಕಿಸಲು ಹಾಗೂ ಈ ಕುರಿತು ಸಚಿವ ಸಂಪುಟಕ್ಕೆ ಸೂಕ್ತ ಶಿಫಾರಸ್ಸುಗಳನ್ನು ಮಾಡಲು ರಚಿಸಿರುವ ಸಚಿವ ಸಂಪುಟದ ಉಪ ಸಮಿತಿಯು ಕಾಲಕಾಲಕ್ಕೆ ವಿದ್ಯುತ್ ಪರಿಸ್ಥಿತಿಯನ್ನು ಪುನರಾವಲೋಕಿಸಿ ನಿರ್ದಿಷ್ಟವಾಗಿ ಹೆಚ್ಚುವರಿ ವಿದ್ಯುತ್ ಅನ್ನು ಖರೀದಿಸದೇ ವಿದ್ಯುತ್ ಪರಿಸ್ಥಿತಿಯನ್ನು ನಿಭಾಯಿಸಲು ಸೂಕ್ತ ನಿರ್ಧಾರವನ್ನು ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.502

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಇಂಡಿಯನ್ ಶುಗರ್ ಮ್ಯಾನ್ಯುಫ್ಯಾಕ್ಚರಿಂಗ್ ಕಂಪನಿ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ, ಇಂಡಿ ತಾಲ್ಲೂಕಿನ, ಹಾವಿನಾಲ್ ಗ್ರಾಮದಲ್ಲಿ ಸ್ಥಾಪಿಸಲು ಅನುಮತಿಸಿರುವ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಯೋಜನಾ ಘಟಕದ ಸಾಮರ್ಥ್ಯವನ್ನು 9 ಮೆ.ವ್ಯಾ. ನಿಂದ 19.5 ಮೆ.ವ್ಯಾ, ಹೆಚ್ಚಿಸಲು ನಿರಾಕ್ಷೇಪಣೆ ನೀಡುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಇಎನ್ 412 ಎನ್‌ಸಿಇ 2007 ದಿನಾಂಕ: 06–12–2007.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/04/ಎಫ್–32/ISMCL/11–12/4257 ದಿನಾಂಕ : 02/03–11–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಇಂಡಿಯನ್ ಶುಗರ್ ಮ್ಯಾನ್ಯುಫ್ಯಾಕ್ಚರಿಂಗ್ ಕಂಪನಿ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ, ಇಂಡಿ ತಾಲ್ಲೂಕಿನ, ಹಾವಿನಾಲ್ ಗ್ರಾಮದಲ್ಲಿ 9.00 ಮೆಗಾ ವ್ಯಾಟ್ (ಗ್ರಾಸ್) ಮತ್ತು 4.85 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಇಂಡಿಯನ್ ಶುಗರ್ ಮ್ಯಾನ್ಯುಫ್ಯಾಕ್ಚರಿಂಗ್ ಕಂಪನಿ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ, ಇಂಡಿ ತಾಲ್ಲೂಕಿನ,ಹಾವಿನಾಲ್ ಗ್ರಾಮದಲ್ಲಿ ಅನುಮತಿಸಿರುವ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಘಟಕದ ಸಾಮರ್ಥ್ಯವನ್ನು ಪ್ರಸ್ತುತ ಇರುವ 9 ಮೆ.ವ್ಯಾ (ಗ್ರಾಸ್)ಗೆ ನಿಂದ 19.5 ಮೆ.ವ್ಯಾ. (ಗ್ರಾಸ್) ಮತ್ತು 4.85 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ನಿಂದ 15.00 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ಗೆ ಸಾಮರ್ಥ್ಯವನ್ನು ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 426 ಎನ್‌ಸಿಇ 2011, ಬೆಂಗಳೂರು, ದಿನಾಂಕ: 30–01–2012.**

ಮೆ॥ ಇಂಡಿಯನ್ ಶುಗರ್ ಮ್ಯಾನ್ಯುಫ್ಯಾಕ್ಚರಿಂಗ್ ಕಂಪನಿ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ, ಇಂಡಿ ತಾಲ್ಲೂಕಿನ, ಹಾವಿನಾಲ್ ಗ್ರಾಮದಲ್ಲಿ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಘಟಕದ ಸಾಮರ್ಥ್ಯವನ್ನು ಪ್ರಸ್ತುತ ಇರುವ 9 ಮೆ.ವ್ಯಾ (ಗ್ರಾಸ್) ನಿಂದ 19.5 ಮೆ.ವ್ಯಾಗೆ (ಗ್ರಾಸ್) ಮತ್ತು 4.85 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ನಿಂದ **15.00 ಮೆ.ವ್ಯಾ.ಗೆ (ಎಕ್ಸ್‌ಪೋರ್ಟೆಬಲ್)** ಹೆಚ್ಚಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಆದೇಶದಲ್ಲಿನ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.503

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್‌ರವರ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರಾ ಎಲ್.ಬಿ.ಸಿ. ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಿಸುವ ಬಗ್ಗೆ.

ಓದಲಾಗಿದೆ:
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 154 ಪಿಪಿಸಿ 94 ದಿನಾಂಕ: 06–09–1994.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 155 ಎನ್‌ಸಿಇ 2005 ದಿನಾಂಕ: 16–06–2005.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 117 ಎನ್‌ಸಿಇ 2006 ದಿನಾಂಕ: 06–03–2006.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 518 ಎನ್‌ಸಿಇ 2008 ದಿನಾಂಕ: 08–05–2009.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 582 ಎನ್‌ಸಿಇ 2009 ದಿನಾಂಕ: 28–02–2011.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಎಸ್ ಹೆಚ್–333/2011/121 ದಿನಾಂಕ: 12/13–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರಾ ಎಲ್.ಬಿ.ಸಿ. ಕಿರು ಜಲ ವಿದ್ಯುತ್ ಯೋಜನೆಯನ್ನು 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಕಂಪನಿಯ ಹೆಸರನ್ನು ಮೆ॥ ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ನಿಂದ ಮೆ॥ ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿ ಎಂದು ಬದಲಾಯಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಸರ್ಕಾರಿ ಆದೇಶದಲ್ಲಿ ಮೆ॥ ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರಾ ಎಲ್.ಬಿ.ಸಿ. ಕಿರು ಜಲ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದುಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಆದೇಶದಲ್ಲಿ ಮೆ॥ ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಭದ್ರ ಎಡದಂಡೆ ಕಾಲುವೆಯಲ್ಲಿ ಹಂಚಿಕೆಯಾಗಿದ್ದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರ ಎಲ್.ಬಿ.ಸಿ. ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ರದ್ದುಪಡಿಸಿರುವುದನ್ನು ಕೆಲವು ನಿಬಂಧನೆಗೊಳಪಟ್ಟು ಪೂರ್ವಸ್ಥಿತಿಗೆ ತಂದು ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ : 31–12–2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಇವರು ಮೆ॥ ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಭದ್ರಾ ಎಡದಂಡೆ ಕಾಲುವೆಯಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರ ಎಲ್.ಬಿ.ಸಿ. ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಂಬಂಧಿಸಿದ ಇಲಾಖೆಗಳ ಅನುಮೋದನೆ ಪಡೆದಿರುವುದಾಗಿ ಹಾಗೂ ಸಿವಿಲ್ ಕಾಮಗಾರಿ ಪ್ರಗತಿಯಲ್ಲಿರುವುದನ್ನು ತಿಳಿಸುತ್ತಾ, ಸದರಿ ಯೋಜನೆಯ ಕಾಲಾವಕಾಶ ವಿಸ್ತರಣೆಗೆ ಪ್ರತಿ ಮೆಗಾ ವ್ಯಾಟ್‌ಗೆ ರೂ. 5.00 ಲಕ್ಷಗಳ ಬ್ಯಾಂಕ್ ಗ್ಯಾರಂಟಿ ಪಾವತಿಸುವ ನಿಬಂಧನೆಗೊಳಪಟ್ಟು ಕಾಲಾವಕಾಶವನ್ನು ದಿನಾಂಕ : 01–01–2012 ರಿಂದ ದಿನಾಂಕ : 31–12–2013 ರವರೆಗೆ ಎರಡು ವರ್ಷಗಳ ಕಾಲ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 462 ಎನ್‌ಸಿಇ 2011, ಬೆಂಗಳೂರು, ದಿನಾಂಕ: 30–01–2012.**

ಮೆ॥ ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಭದ್ರಾ ಎಡದಂಡೆ ಕಾಲುವೆಯಲ್ಲಿ ಹಂಚಿಕೆಯಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರಾ ಎಲ್.ಬಿ.ಸಿ. ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಿಸಲು ಪ್ರತಿ ಮೆಗಾ ವ್ಯಾಟ್ ಗೆ ರೂ. 5.00 ಲಕ್ಷಗಳ ಬ್ಯಾಂಕ್ ಗ್ಯಾರಂಟಿ ಪಾವತಿಸುವ ನಿಬಂಧನೆಗೊಳಪಟ್ಟು **ದಿನಾಂಕ : 01–01–2012 ರಿಂದ ದಿನಾಂಕ : 31–12–2013 ರವರೆಗೆ ವಿಸ್ತರಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್.504